
"ವಿಲಾಸ ಮಂದಿರದ ರಹಸ್ಯ"
"ಪ್ರಣಯ ಚೋರ"
ಕಾದಂಬರಿಗಳನ್ನು ಬರೆದ
ಹೆಚ್. ಸಂಜೀವಮೂರ್ತಿ
ಅವರ ರಹಸ್ಯಾತ್ಮಕ ಪತ್ತೇದಾರಿ
ಚೋರನಾರಿ
ಚಂಚಲ
8K3.6
SAN C

# ನಾರಿಯೋ? ಮಾರಿಯೋ??

ಅವಳ ಹೆಸರು ಚಂಚಲ. ದರೋಡೆಗಾರರಿಗೆ ರಾಣಿಯಾಗಿ ಮೆರೆಯಬೇಕೆಂಬ ಆಸೆ ಅವಳಿಗೆ. ಯಾರೂ ಊಹಿಸದ, ಧೈರ್ಯ ಮಾಡದ ದರೋಡೆ ಮಾಡಿ ಹೆಸರು ಗಳಿಸಬೇಕೆಂದಳಾಕೆ. ತನ್ನ ಯೋಜನೆಯಂತೆ ಎಲ್ಲವನ್ನು ಕರಾರುವಾಕ್ಕಾಗಿ ನಡೆಸಿದಳು. ಆದರೆ ಕೊನೆಗೆ ಸತ್ಯಕ್ಕೆ ಜಯವಾಯಿತು ಚಂಚಲಾ ಸೆರೆಮನೆ ಸೇರಬೇಕಾಯಿತು.

ಪ್ರತಿಯೊಂದು ಪುಟ ಪುಟಕ್ಕೂ ಮನ ಸೆರೆ ಹಿಡಿಯುವಂತಹ ಘಟನೆಗಳು, ಚೋರನಾರಿ ಚಂಚಲ ತೋರುವ ಧೈರ್ಯ ಮನೋಸ್ಥೈರ್ಯ ನಿಮ್ಮನ್ನು ದಂಗಾಗಿಸುತ್ತದೆ.

ಇದು ಬಿ. ಹೆಚ್. ಸಂಜೀವಮೂರ್ತಿಯವರ ಪತ್ತೇದಾರಿ



ರಾಜೇಂದ್ರ ಪ್ರಕಾಶನ

ನಂ. ಕೆ. 56, ನಾರಾಯಣ ನಿಲಯ
ಬಿಂದಿರೆಡ್ಡಿ ಸರ್ಕಲ್. ಲಕ್ಷ್ಮೀ ನಾರಾಯಣಪುರಂ
ಬೆಂಗಳೂರು-21



# ರಾಜೇಂದ್ರ ಪ್ರಕಟನೆಗಳು

ಮಾಯಾವಾದಿ ಮಮತೆ  2-00

—ಎನ್ ನರಸಿಂಹಯ್ಯ

ವಿಲಾಸ ಮಂದಿರದ ರಹಸ್ಯ 2-00

—ಬಿ. ಹೆಚ್. ಸಂಜೀವಮೂರ್ತಿ

ಹೋಟೆಲ್ ಅರೇಬಿಯಾ 2-00

—ಬಿ. ಕೆ. ಸುಂದರ್‌ರಾಜ್

ಪ್ರಣಯ ಚೋರ 2-00

—ಬಿ. ಹೆಚ್. ಸಂಜೀವಮೂರ್ತಿ

ಅವಂತಿ ಅಮರಾವತಿ 3-00

—ಬಿ. ಕೆ. ಸುಂದರ್‌ರಾಜ್

ಚೋರ ನಾರಿ ಚಂಚಲಾ 2-00

—ಬಿ. ಹೆಚ್. ಸಂಜೀವಮೂರ್ತಿ

ದೆವ್ವಗಳ ದೇಗುಲ 1-25

—ಬಿ ಹೆಚ್ ಸಂಜೀವಮೂರ್ತಿ

ರಹಸ್ಯ ಕೊಲೆಗಾರ —ವಿ ಸುಬ್ರಮಣ್ಯ 1-25

**ಈಗ ಅಚ್ಚಿನಲ್ಲಿ**

ವ್ಯಾಮೋಹದ ಮಡಿಲಲ್ಲಿ 4 00

—ಟಿ ಶಾಂತಿ

ಬಲೆ ಬೀಸಿದ ಸುಂದರಿ 2-00

—ಬಿ. ಹೆಚ್. ಸಂಜೀವಮೂರ್ತಿ

-ವಿವರಗಳಿಗಾಗಿ-

## ರಾಜೇಂದ್ರ ಪ್ರಕಾಶನ

ಕೆ 56, ನಾರಾಯಣ ನಿಲಯ, ಲಕ್ಷ್ಮೀನಾರಾಯಣಪುರ,
ಬಂಡಿರೆಡ್ಡಿ ಸರ್ಕಲ್, ಬೆಂಗಳೂರು-21

# ದುವ ಮುನ್ನ....

ನನ್ನ ಇತ್ತೀಚಿನ ಕೃತಿಗಳಾದ ವಿಲಾಸ ಮಂದಿರದ ರಹಸ್ಯ, ಪ್ರಣಯ ೋರ ಗಳನ್ನು ತುಸು ಹೆದರಿಕೆಯಿಂದಲೇ ಓದುಗರಿಗೆ ಅರ್ಪಿಸಿದೆ ಕೃತಿಗಳಿಗೆ ಚ್ಚುಗೆ ವ್ಯಕ್ತ ಪಡಿಸಿ ಅನೇಕ ಪತ್ರಗಳು ಬಂದಿವೆ. ವಿಲಾಸ ಮಂದಿರದ ಹಸ್ಯ ಬಿಡುಗಡೆಯಾದ ಒಂದೇ ತಿಂಗಳಲ್ಲಿ ಪ್ರತಿಗಳೆಲ್ಲಾ ಮುಗಿದು ಹೋದವು.

ಆ ಬೆಂಬಲದಿಂದ ಉತ್ತೇಜಿತನಾಗಿ ಚೋರನಾರಿ ಚಂಚಲಾ ನಿಮಗೆ ರ್ಪಿಸುತ್ತಿದ್ದೇನೆ. ಈ ಪತ್ತೇದಾರಿ ಆ ಪತ್ತೇದಾರಿಗಳಲ್ಲಿನ ತಂತ್ರಗಳಿಗೆ ತದ್ವಿ ದ್ಧವಾಗಿರುವಂತೆ ನವ ನೂತನ ಸನ್ನಿವೇಶಗಳನು ಸೃಷ್ಟಿಸಿದ್ದೇನೆ. ನಿಜ ಜೀವ ನಲ್ಲಿ ನಡೆಯುವಂಥ ಘಟನೆಗಳನ್ನು ಆರಿಸಿಕೊಂಡು, ರಹಸ್ಯ ಪೂರ್ಣವಾಗಿರು ಕ್ಕಂತಹ ಕತೆಯನ್ನು ಬರೆದಿದ್ದೇನೆ.

ಒಂದು ವಿಧದಲ್ಲಿ ಈ ತೆರದ ಪತ್ತೇದಾರಿ ಕಾದಂಬರಿ ಕನ್ನಡದ ಸಾಹಿತ್ಯ ಂದವನದಲ್ಲಿ ಅಪರೂಪವೆಂದೇ ನನ್ನ ದೃಢವಾದ ಭಾವನೆ. ನಿಮ್ಮೆಲ್ಲರ ಭಾವನೆ ಲ್ಲಿ ಅದು ತಪ್ಪಾಗಿಯೂ ಇರಬಹುದು; ಸರಿಯಾಗಿಯೂ ಇರಬಹುದು ಇದ್ದ ದ್ದು ಇದ್ದಂತೆ ಹೇಳಬೇಕಾಗಿರುವುದು ಓದುಗರಾದ ನಿಮ್ಮ ಕರ್ತವ್ಯ.

ನನ್ನ ಕೃತಿಗಳ ಬಗ್ಗೆ ಅನೇಕರು ಪತ್ರಗಳನ್ನು ಬರೆದು, ಪ್ರತ್ಯುತ್ತರ ಅಪೇ ಸಿದ್ದಾರೆ. ಆದರೆ ಎಲ್ಲರಿಗೂ ಉತ್ತರಿಸಲು ಸಾಧ್ಯವಿಲ್ಲ. ಓದುಗರು ಇದರ ಬಗ್ಗೆ ಮಿಸಬೇಕು. ಆ ರೀತಿ ನಮ್ಮ ಉತ್ತರ ನಿಮಗೆ ಬೇಕಾದಲ್ಲಿ ಜಂಟೀ ಕಾರ್ಡ ಥವ ಅಂಚೇ ಚೀಟಿ ಇಟ್ಟು ಕಳಿಸಬೇಕು. ಆಗ ನಾವು ಪ್ರತ್ಯುತ್ತರ ಬರೆಯಲು ಸಾಧ್ಯವಾಗುವುದು. ಎಂದಿನಂತೆ ನನ್ನ ಬರಹಗಳಲ್ಲಿನ ದೋಷವನ್ನು ತಿಳಿಸುವಿ ರೆಂದು ಭಾವಿಸುತ್ತೇನೆ.

ಈ ಕಾದಂಬರಿಯ ಕಥಾ ಪಾತ್ರ ವಿವರಗಳೆಲ್ಲಾ ನನ್ನ ಸ್ವಯಂ ಕಲ್ಪಿತ. ಸಮಾಜದಲ್ಲಿ ಜೀವಂತವಾಗಿರುವ ಯಾವ ವ್ಯಕ್ತಿಗೆ ಆಗಲಿ ಅನ್ವಯಿಸುವುದಿಲ್ಲ.

ಈ ಕಾದಂಬರಿಯನ್ನು ಬರೆಯಲು ಕಥಾ ಪಾತ್ರಗಳ ವಿವರಣೆಯನ್ನು ಸೂಕ್ಷ್ಮವಾಗಿ ವಿವರಿಸಿ, ಹುರಿದುಂಬಿಸಿ, ನನ್ನ ಲೇಖನಿಯಿಂದ ಬರೆಯಿಸಿ ತಮ್ಮದೇ ಆದ ರಾಜೇಂದ್ರ ಪ್ರಕಾಶನದ ಮಾಲೆಯಿಂದ ಬೆಳಕಿಗೆ ತಂದು ಓದುಗರ ಮಡಿಲಿಗೆ ಅರ್ಪಿಸುತ್ತಿರುವ ಶ್ರೀ ಎಂ. ಎನ್. ದೇವಕರ್ ಅವರಿಗೆ ಅನೇಕ ಕೃತಜ್ಞತೆಗಳು.

ಈ ಕಾದಂಬರಿಯನ್ನು ಸುಂದರವಾಗಿ ಮುದ್ರಿಸಿದ ಚಂದ್ರೋದಯ ಪ್ರಿಂಟರಿ ಅವರ ಬಳಗಕ್ಕೆ ಅನೇಕ ವಂದನೆಗಳು.

ಕಥಾ ಪ್ರಾತಕೊಪ್ಪುವ ಜೀವಂತ ಚಿತ್ರ ಬರೆದುಕೊಟ್ಟ ಕಲಾವಿದ ರಾ. ಸೂರಿಯವರನ್ನೂ ಇಲ್ಲಿ ನೆನೆಯಲೇಬೇಕು.

ಓದುಗರಿಂದ ವಿಮರ್ಶೆ, ಸೂಚನೆಗಳನ್ನು ಎಂದಿನಂತೆ ಬರಲು ಹೃದಯಪೂರ್ವಕವಾಗಿ ಆಹ್ವಾನಿಸುತ್ತೇವೆ.

—ಬಿ. ಹೆಚ್. ಸಂಜೀವಮೂರ್ತಿ

# ಒಂದು

ವಿಧಾನ ಸೌಧದ ಡಬ್ಬಲ್ ರಸ್ತೆಯುದ್ದಕ್ಕೂ ಕಾರ್ಪೊರೇಷನ್ ವಿದ್ಯುತ್ ದೀಪಗಳು ಪ್ರಕಾಶದಿಂದ ಬೆಳಗುತ್ತಿದ್ದವು.

ಚಂಚಲಾದೇವಿಯ ತುಟಿಗಳು ಆ ದೀಪಗಳ ಬೆಳಕಿನಲ್ಲಿ ಮಿನುಗುವಂತೆ ಕಂಗೊಳಿಸುತ್ತಿದ್ದವು.

ಆ ತುಟಿಗಳಿಂದ ಅಮೃತ ಧಾರೆಯಂತೆ ಹೊರ ಹೊಮ್ಮುವ ಸುಧಾರಸ ಅದೆಷ್ಟು ಮಧುರವಾಗಿರುತ್ತದೆಂದು ಊಹಿಸಿಕೊಳ್ಳುತ್ತಿದ್ದ ಟ್ಯಾಕ್ಸಿ ಡ್ರೈವರ್.

ಕಾರ್ಪೊರೇಷನ್ ವೃತ್ತದ ಬಳಿ ಕೆಂಪು ದೀಪ ಬೆಳಗಿತು.

ಟ್ಯಾಕ್ಸಿ ಇದ್ದಕ್ಕಿದ್ದಂತೆ ನಿಂತಿತು.

ಅವಳ ತಲೆಯಲ್ಲಿ ವಿವಿಧ ಆಲೋಚನೆಗಳು ಆವರಿಸಿಕೊಂಡಿದ್ದವು

ತುಂಬು ಕಪೋಲಗಳ ಮೇಲೆ ರೋಜಾ ಬಣ್ಣದ ಕಾಂತಿ ಹರಡಿಕೊಂಡಿತು.

ಕಾಡಿಗೆ ಬಳಿದ ಕಣ್ಣುಗಳಲ್ಲಿ ಅದಾವೋ ಮಧುರಾನುಭವಗಳು ಆವರಿಸಿ ಕೊಂಡಿದ್ದವು.

ಹಸಿರು ದೀಪ ಬೆಳಗುತ್ತಿದ್ದಂತೆ ಟ್ಯಾಕ್ಸಿ ಮುಂದಕ್ಕೆ ಹೊರಟಿತು.

ಚಂಚಲಾದೇವಿ ತನ್ನಲ್ಲಿದ್ದ ಹ್ಯಾಂಡಬ್ಯಾಗ್ ತೆರೆದಳು. ಲಿಪ್‌ಸ್ಟಿಕ್‌ನಿಂದ ತುಟಿಗಳನ್ನು ಕೆಂಪು ಮಾಡಿಕೊಂಡಳು.

ಗಾಳಿಗೆ ಚೆದುರಿದ ಮುಂಗುರುಳು ಅವಳ ಕಪೋಲಗಳ ಮೇಲೆ ಬಿದ್ದು ಅವಳನ್ನೇ ಚಕಿತಳನ್ನಾಗಿ ಮಾಡುತ್ತಿದ್ದವು.

ಅಕಸ್ಮಾತ್ತಾಗಿ ಎಡಗಡೆಗೆ ತಿರುಗಿ ನೋಡಿದಳು.

"ಎರಡು ಬೇಕು, ಮೂರು ಸಾಕು."

ಎಂಬ ಬೋರ್ಡು ಅವಳನ್ನು ಅಣಕಿಸಿತು.

ಅವಳಲ್ಲಿನ ತುಂಟತನ ಆ ಕೆಂಪು ತ್ರಿಕೋಣವನ್ನು ಮುದ್ದಾಗಿ ಮನದಲ್ಲಿಯೇ ತೆಗಳಿತು

ಟ್ಯಾಕ್ಸಿ ಪುರಭವನ ದಾಟಿ ಮತ್ತೊಂದು ನಿಮಿಷದಲ್ಲಿ ರವೀಂದ್ರ ಕಲಾಕ್ಷೇತ್ರದ ಮುಂದೆ ನಿಂತಿತು.

ಚಂಚಲಾದೇವಿ ಟ್ಯಾಕ್ಸಿಯನ್ನಿಳಿದು ಮೀಟರ ನೋಡಿಕೊಂಡು ಡ್ರೈವರ ಕೈಗೆ ಹಣ ಕೊಟ್ಟಳು. ರವೀಂದ್ರ ಕಲಾಕ್ಷೇತ್ರದ ಮೈನ್ ಗೇಟ್ ದಾಟಿ ಒಳಗಡೆಗೆ ಪ್ರವೇಶಿಸಿದಳು.

ರಂಗು ರಂಗಿನ ವಿದ್ಯುತ್ ದೀಪಗಳಿಂದ ಆ ಕಲಾಮಂದಿರದ ಹೊರಭಾಗವನ್ನೆಲ್ಲಾ ಅಲಂಕರಿಸಿದ್ದರು. ಅಲ್ಲಿನ ಎಲ್ಲಾ ಮರ, ಗಿಡ ಬಳ್ಳಿಗಳ ಮೇಲೂ ವಿವಿಧ ಬಣ್ಣಗಳ ದೀಪಗಳು ಬೆಳಗುತ್ತಿದ್ದವು. ಬೆಲೆ ಬಾಳುವ ಅನೇಕ ಕಾರು ಒಂದರ ಪಕ್ಕದಲ್ಲಿ ಮತ್ತೊಂದು ನಿಂತಿದ್ದವು.

ಆ ದಿನವೇ ಹೊಸದಾಗಿ ಕೊಂಡ ರೋಜಾ ರಂಗಿನ ಸೀರೆ ಮ್ಯಾಚಿಂಗ್ ಕಲರಿನ ರವಿಕೆ ಅವಳ ಸೌಂದರ್ಯವನ್ನು ಇಮ್ಮಡಿಗೊಳಿಸಿದ್ದಿತು. ಚಂಚಲಾದೇವಿ ಸೌಂದರ್ಯರಾಣಿ. ಸಣ್ಣನೆಯ ಸೊಂಟ, ತುಂಬು ಯೌವ್ವನ ಕಲಶಗಳಾದ ಕುಚಗಳು, ಇಟಾಲಿಯನ್ ಚಿತ್ರ ತಾರೆಯರಲ್ಲಿರುವ ಆಕರ್ಷಣೆ ಅವಳಲ್ಲಿದೆ. ಸೋಫಿಯಾ ಲಾರೆನ್, ಜಿನಾಲಿಲೊಬ್ರಿಗೆಡಾ, ರಾಕೆಲ್ ವೆಲ್ಚರಂತಹ ಚಿತ್ರ ತಾರೆಯರಿಗಿರುವ ಗ್ಲಾಮರ ಎಲ್ಲವನ್ನೂ ಬ್ರಹ್ಮ ಅವಳೊಬ್ಬಳಿಗೆ ಮಾತ್ರ ಸುರಿದು ಸೃಷ್ಟಿಸಿದ್ದಾನೆನ್ನಿಸುತ್ತದೆ. ಒಂದು ಸಾರಿಗೆ ನೋಡಿದ ಯಾರೇ ಆಗಲಿ ಅವಳ ಸೌಂದರ್ಯವನ್ನು ಎಂದಿಗೂ ಮರೆಯಲಾರರು.

ಅವಳ ಕೈಯಲ್ಲಿದ್ದ ಕೈ ಗಡಿಯಾರ ಏಳೂವರೆ ತೋರಿಸುತ್ತಿತ್ತು.

ಅವಳು ಅರಿತಿದ್ದಳು, ತಾನು ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಯು ಸಮಾರಂಭಕ್ಕೆ ಸಮಯ ಮೀರಿ ಬಂದಿದ್ದೇನೆಂದು.

ಆ ದಿನದ ಪ್ರೋಗ್ರಾಂ ಇಂಟರ್ ನ್ಯಾಷನಲ್ ನೈಟ್ !

ಆ ಸಮಾರಂಭ ಆರು ಗಂಟೆಗೇ ಪ್ರಾರಂಭವಾಗಿದ್ದಿತು.

ವಿಲಾಸದ ವಸಂತವನವೆಂಬ ಮಲಬಾರದ ಮ್ಯಾಜಿಕ್, ಕರ್ನಾಟಕ ಕಲಾಕ್ಷೇತ್ರ ವಿದ್ಯಾರ್ಥಿನಿಯರ ಭರತನಾಟ್ಯ, ಹಾಗ್ ರಾಸ್ ಗಿಟಾರ ವಾದ್ಯ, ಮಲೇಷಿಯನ್ ಗರ್ಲ್ಸ್ ರೋಮಾಂಚಕ ನೃತ್ಯ, ಅಮೇರಿಕನ್ ಬಾಲಕಿಯರ ರಾಕ್ ಎನ್‌ರೋಲ್, ರಸ್ಯದ ತರುಣಿಯರ ಬ್ಯಾಲೆಟ್, ಸುಬ್ಬುಲಕ್ಷ್ಮೀ ಸಂಗೀತ....ಇವುಗಳೆಲ್ಲಾ ಪೂರ್ಣಗೊಂಡಿದ್ದವು.

ಕುಮಾರಿ ಕಮಲಾ ವೀಣೆ ನುಡಿಸುತ್ತಿದ್ದಳು.

ಚಂಚಲಾದೇವಿ ತನ್ನ ಸೀಟ್ ನಂಬರ್ ನೋಡಿಕೊಂಡು ಕುಳಿತಳು.

ಸುಮಾರು ಎರಡು ಸಾವಿರ ಮಂದಿ ಹಾಜರಿದ್ದರು.

ಇನ್ನೂ ಪಿಯಾನೋ, ಸಿತಾರ ವಾದ್ಯಗಳು, ಸಿಂಗಪೂರನಿಂದ ಇಂಡಿಯನ್ ಏರ್‌ಲೈನ್ ಬೋಯಿಂಗ್ 907 ನಲ್ಲಿ ಬೆಂಗಳೂರು ಏರೋ ಡ್ರಾಮಿನಲ್ಲಿ ಇಳಿದು, ಅಲ್ಲಿಂದ ನೇರವಾಗಿ ರಂಗಭೂಮಿಯನ್ನೇರಿ ಲಾಜಿಕ್ ಫರೀದನ ಕಾಂಡ್ಯನ್ ಡ್ಯಾನ್ಸ್ ಪ್ರೋಗ್ರಾಮ್‌ನಲ್ಲಿದ್ದವು. ಸ್ಪಾನಿಷ್ ಆರ್ಟ್ ಕ್ಲಬ್, ಟೋಕಿಯೋ ಸುಂದರಿಯರ ಹಾಟ್ ಟ್ರಿಕ್‌ಗಳೂ ಸಹ ಇದ್ದವು.

ಆದರೆ ಚಂಚಲಾದೇವಿಯ ಮನಸ್ಸು ಅವುಗಳಾವುದರ ಮೇಲೂ ಇರಲಿಲ್ಲ. ಅವಳ ಬರುವಿಕೆಯ ಕಾರಣವೇ ಬೇರೆ ಇತ್ತು.

ಪ್ರೋಗ್ರಾಮ್ ಮಧ್ಯೆ ಇಂಟರ್ವೆಲ್ ಇರುತ್ತದೆ. ಆಗ ದೀಪಗಳೆಲ್ಲಾ ಬೆಳಗುತ್ತವೆ. ಅವಳಿಗೆ ಬೇಕಾದ ವ್ಯಕ್ತಿ ಸಿಗುತ್ತಾನೆ. ಅದುವರೆವಿಗೂ ಸಹನೆಯಿಂದಲೇ ಕುಳಿತಳು.

ಇದ್ದಕ್ಕಿದ್ದಂತೆ ದೀಪಗಳೆಲ್ಲಾ ಬೆಳಗಿದವು. ಆ ಕಲಾಮಂದಿರವೆಲ್ಲಾ ಆ ದೀಪಗಳ ಪ್ರಕಾಶದಲ್ಲಿ ಹಗಲಿನಂತೆ ಕಂಗೊಳಿಸಿತು.

ಪ್ರೇಕ್ಷಕರೆಲ್ಲರೂ ಸರ ಸರನೇ ಡೈನಿಂಗ್ ಹಾಲಿನ ಕಡೆಗೆ ನಡೆಯತೊಡಗಿದರು. ಅಲ್ಲಿ ಆ ದಿನದ ಸ್ಪೆಷಲ್ ವ್ಯವಸ್ಥೆಯೇನೆಂಬುದು ಅವಳಿಗೆ ತಿಳಿದಿತ್ತು.

ಚೈನೀಸ್ ಐಟಮ್ಸ್ ಸಿಂಗಪೂರ್ ಮೂಲಕ ಬಂದಿದ್ದವು. ಅಮೇರಿಕದ ಪದಾರ್ಥಗಳನ್ನು ರುಮೇನಿಯಾ ಅಧಿಕಾರಿಗಳು ಇಂಡಿಯಾಗೆ ಕಳಿಸಿದ್ದರು. ಸ್ವೀಡಿಷ್ ಸ್ಯಾಂಡ್ ವಿಚ್‌ಗಳು, ಇನ್ನೂ ಅನೇಕಾನೇಕ ದೇಶ ವಿದೇಶಗಳ ಪದಾರ್ಥಗಳು ಅಲ್ಲಿ ಲಭಿಸುತ್ತಿದ್ದವು.

ಅವುಗಳೆಲ್ಲವನ್ನೂ ಅವಳು ಹಿಂದೆ ಬಹಳ ಸಾರಿ ರುಚಿ ನೋಡಿದವಳು. ಈಗಲೂ ಒಂದು ಸಾರಿ ರುಚಿ ನೋಡಬೇಕೆಂದುಕೊಂಡಳು. ಆದರೆ ಅವಳು ಇಲ್ಲಿಗೆ ಅರಸಿ ಬಂದ ಕಾರ್ಯಕ್ರಮವೇ ಬೇರೆಯಾಗಿತ್ತು.

ತನ್ನ ಸೀಟಿನಿಂದ ಎದ್ದು ಮೆಲ್ಲನೆ ಡ್ರೈಸಿಂಗ್ ಹಾಲಿನೊಳಕ್ಕೆ ಅಡಿಯ್ಟ್ಟಳು ಆ ಕಡೆ—ಈ ಕಡೆ ನೋಡಿದಳು. ಅವಳ ಮುಖ ಮುದುಡಿಕೊಂಡ್ರು ಅನ್ಯಮನಸ್ಕವಾಯಿತು.

ಮತ್ತೊಮ್ಮೆ ಆ ಕೊನೆಯಿಂದ ಈ ಕೊನೆಯುವರೆವಿಗೂ ತನಗೆ ಬೇಕಾದ ವ್ಯಕ್ತಿಯನ್ನು ಹುಡುಕುತ್ತಾ ಹೊರಟಳು.

ಅವಳ ಶ್ರಮಕ್ಕೆ ತಕ್ಕ ಫಲ ಲಭಿಸಿತು.

ಹಳದಿ ಪಟ್ಟೆಯ ಕೆಂಪು ಸ್ವೆಟರ್ ಧರಿಸಿದ ಅಜಾನುಬಾಹು ವ್ಯಕ್ತಿಯೊಬ್ಬ ಅವಳ ನೋಟಕ್ಕೆ ಸಿಲುಕಿಕೊಂಡ.

ಒಂದು ಕ್ಷಣವೂ ತಡ ಮಾಡದೆ ಚಂಚಲಾದೇವಿ ಆತುರತೆಯಿಂದ ಅವನ ಬಳಿಗೆ ಸಮೀಪಿಸಿದಳು.

ಅವನು ಒಂದು ಮೂಲೆಯಲ್ಲಿ ಕುರ್ಚಿಯ ಮೇಲೆ ಕುಳಿತು ಚಿಕನ್ ಸ್ಯೂಪ್ ಕುಡಿಯುತ್ತಿದ್ದ. ಮಧ್ಯೆ–ಮಧ್ಯೆ ಸಿಗರೇಟು ದಮ್ಮು ಎಳೆಯುತ್ತಿದ್ದ.

ಅವನೇ ತನಗೆ ಬೇಕಾದ ವ್ಯಕ್ತಿಯೆಂದು ಭಾವಿಸಿಕೊಂಡಳು.

"ಹಲ್ಲೋ."

—ಎಂದು ವಿಷ್ ಮಾಡಿದಳು ಚಂಚಲಾದೇವಿ.

ಅವನು ತಲೆಯೆತ್ತಿ ನೋಡಿದ.

ಅವಳು ಮೋಹಕವಾಗಿ ನಕ್ಕಳು.

ಸುಂದರಾಂಗಿಯೊಬ್ಬಳು ತನ್ನನ್ನು ಮಾತನಾಡಿಸಿ ನಗುತ್ತಿರುವುದನ್ನು ಕಂಡು ಆಶ್ಚರ್ಯಚಕಿತನಾದ ಅವನು.

"ಅವಳಿಗೆ ನಾನು ಪರಿಚಯಸ್ಥನೇ ? ಹಾಗಾದರೆ ಅವಳಾರೆಂಬುದು ನನಗೆ ತಿಳಿದಿಲ್ಲವಲ್ಲ."

—ಎಂದುಕೊಂಡನು ತನ್ನಲ್ಲೇ.

"ಏಕೆ ಮಿಸ್ಟರ್! ನಾನು ಯಾರೆಂಬುದು ಅರಿಯದೆ. ಆಲೋಚನೆ ಮಾಡುತ್ತಿರುವಿರಾ ?"

ನಗುತ್ತಲೇ ಕೇಳಿದಳು.

"ಹೌದು. ತಾವು ಯಾರೆಂಬುದು ನನಗೆ ಹೊಳೆಯುತ್ತಲೇ ಇಲ್ಲ."

"ನಾನು ಯಾರೆಂದು ಇದಕ್ಕೆ ಮೊದಲು ನಿಮಗೆ ಎಂದಾದರೂ ತಿಳಿದಿದ್ದರೆ ಅಲ್ಲವೆ ?"

"ಹೌದೇ ! ಹಾಗಾದರೆ ತಾವು ಯಾರು ? ತಮ್ಮಂತಹ ಸೌಂದರ್ಯ ರಾಣಿ ನನ್ನನ್ನು ಮಾತನಾಡಿಸುತ್ತಿದ್ದರೆ ನನಗೇ ಹೆಮ್ಮೆಯೆನಿಸುತ್ತಿದೆ."

"ನಾನು ಯಾರೆಂದು ತಿಳಿಸುತ್ತೇನೆ. ತಾವು ಇಲ್ಲಿಂದ ಎದ್ದು ಸ್ವಲ್ಪ ಹೊರಗೆ ಬರುವಿರಾ ?"

—ಎಂದು ಕೇಳಿದಳು ಚಂಚಲಾದೇವಿ.

"ಅವಶ್ಯವಾಗಿ ನಡೆಯಿರಿ."

—ಎಂದ ಆ ವ್ಯಕ್ತಿ ತಾನು ಕುಳಿತಿದ್ದ ಕುರ್ಚಿ ಬಿಟ್ಟು ಚಂಚಲಾದೇವಿಯನ್ನು ಹಿಂಬಾಲಿಸಿದ.

# ಎರಡು

"ಡಿಯರ್ ಫ್ರೆಂಡ್ಸ್, ಒಂದಾನೊಂದು ನಗರವಿತ್ತು. ಆ ನಗರದ ವಲಯದಲ್ಲಿ ಮೂರು ಕಾಲುವೆಗಳಿದ್ದವು. ಒಂದು ಕಾಲುವೆಯ ತೀರದಲ್ಲಿ, ಒಂದು ಸಾಯಂಕಾಲ ಒಂದು ಜೊತೆ ಪ್ರೇಮಿಗಳು ಪ್ರಣಯ ಸಾಗರದಲ್ಲಿ ವಿಹಾರಿಸುತ್ತಿದ್ದಾಗ ಅವರಿಬ್ಬರ ಮಧ್ಯೆ ಈ ರೀತಿ ಸಂಭಾಷಣೆ ನಡೆಯಿತು.

"ನನ್ನ ಚಲುವೆ ಗೌರಿ. ನಿನಗೇನಾದರೂ ಮೈಸೂರು ಲಾಟರಿಯಲ್ಲಿ ಒಂದು ಸಾವಿರ ರೂಪಾಯಿಗಳು ಲಭಿಸಿದರೆ ಏನು ಮಾಡುವೆ?"

—ಎಂದು ಕೇಳಿದ ಪ್ರಿಯತಮ ತನ್ನ ಪ್ರೇಯಸಿಯನ್ನು.

"ಬಂಗಾರದ ಅವಲಕ್ಕಿ ಸರ ಮಾಡಿಸಿಕೊಂಡು ಕೊರಳಲ್ಲಿ ಅಲಂಕರಿಸಿಕೊಳ್ಳುತ್ತೇನೆ ಪ್ರಿಯಾ."

—ಎಂದು ಹೇಳಿದಳು ಆ ಪ್ರೇಯಸಿ.

"ಹತ್ತು ಸಾವಿರ ಬಂದರೆ...."

"ಒಂದು ಚಿಕ್ಕ ಹೆಂಚಿನ ಮನೆ ಕಟ್ಟಿಸಿಕೊಂಡು ಸುಖವಾಗಿರೋಣ."

"ಒಂದು ಲಕ್ಷ ರೂಪಾಯಿಗಳು ಬಂದರೆ...."

"ನಿನ್ನಿಂದ ದೂರ ಸರಿದು, ನಿನಗೆ ಮೂರು ನಾಮಗಳು ಹಾಕಿ ಸಿನಿಮಾಗೆ ಸೇರಿಕೊಳ್ಳುತ್ತೇನೆ. ಜಾಲಿಯಾಗಿ ತಿರುಗುತ್ತೇನೆ."

—ಎಂದು ಧೈರ್ಯದಿಂದ ಹೇಳಿದಳು ಆ ಪ್ರೇಯಸಿ.

"ಮಿಸ್ಟರ್ ಸುಂದರ! ಆ ಪ್ರೇಯಸಿಗೆ ಮೈಸೂರು ಲಾಟರಿಯಲ್ಲಿ ಒಂದು ಲಕ್ಷ ರೂಪಾಯಿ ಬಂದವೋ—ಇಲ್ಲವೋ ತಿಳಿಯದು. ಈಗ ನಿನ್ನನ್ನು ಅದೇ ಪ್ರಶ್ನೆ ಕೇಳುತ್ತೇನೆ. ಅದಕ್ಕೆ ಸರಿಯಾದ ಉತ್ತರ ಹೇಳುವೆಯಾ?"

—ಎಂದು ಕೇಳಿದ ಮೈಕಲ್.

"ಕೇಳು ಮಿಸ್ಟರ್ ಮೈಕಲ್ ಖಂಡಿತ ಉತ್ತರ ಹೇಳುತ್ತೇನೆ."

—ಎಂದು ಹೇಳಿದ ಸುಂದರ.

"ನಿನಗೆ ಅಕಸ್ಮಾತ್ತಾಗಿ ಒಂದು ಲಕ್ಷ ರೂಪಾಯಿಗಳು ಲಭಿಸಿದರೆ ಏನು ಮಾಡುವೆ?"

ಹಳದಿ ಪಟ್ಟೆಯ ಕೆಂಪು ಸ್ವೆಟರ್ ಧರಿಸಿದ ಅಜಾನುಬಾಹು ವ್ಯಕ್ತಿ....ಮೈಕಲ್ ಕೇಳಿದ.

ಸುಂದರ ನಗೆ ಬೀರಿದ. ಒಂದು ಸಿಗರೇಟು ಹಚ್ಚಿ, ಬಲವಾಗಿ ಸೇದಿ ಹೊಗೆ ಸುರುಳಿಯಾಗಿ ಬಿಟ್ಟ.

"ಮಿಸ್ಟರ್ ಮೈಕಲ್! ಐಯಾಮ್ ಸಾರಿ! ಇದ್ದಕ್ಕಿದ್ದಂತೆ ನನಗೆ ಒಂದು ಲಕ್ಷ ರೂಪಾಯಿಗಳೇನಾದರೂ ಲಭಿಸಿದರೆ....ನಾನೂ ಸಹ ಆ ಪ್ರೇಯಸಿ ತನ್ನ ಪ್ರಿಯನಿಗೆ ಹೇಳಿದಂತೆ ಮಾಡಬೇಕೆಂದಿರುವೆ. ನಿನ್ನ ಫ್ರೆಂಡಷಿಪ್ ಬಿಟ್ಟು ನನ್ನ ಊರಿಗೆ ಹೊರಟುಹೋಗುತ್ತೇನೆ. ನಾನೇ ಲಕ್ಷಾಧಿಕಾರಿಯಾದರೆ ಈ ನಿನ್ನ ಗ್ಯಾಂಗಿನಲ್ಲಿ ಒಂದು ಕ್ಷಣವು ಇರಲಾರೆ. ಇದ್ದ ನಿಜ ವಿಷಯವನ್ನು ತಿಳಿಸಿದ್ದೇನೆ.!

ಸಿಗರೇಟು ಸೇದುತ್ತಲೇ ಹೇಳಿದ ಸುಂದರ.

"ಶಭಾಷ್ ಸುಂದರ....! ಶಭಾಷ್....! ನಿನ್ನ ಮಾತನ್ನು ನಾನು ಒಪ್ಪಿದೆ."

—ಎನ್ನುತ್ತಾ ಸುಂದರನ ಭುಜ ತಟ್ಟಿದ ಮೈಕಲ್.

ಸುಂದರ ಆಲೋಚನೆಯಲ್ಲಿ ಮುಳುಗಿದ. ಮೈಕಲ್‌ನ ಈ ಉದಾಹರಣೆಯ ಹಿಂದೆ ಯಾವುದೋ ಉದ್ದೇಶ ಅಡಗಿದೆಯೆಂದುಕೊಂಡ. ಅದನ್ನು ಹೇಳುವ ಸಲುವಾಗಿಯೇ ಇದೆಲ್ಲಾ ಮೊದಲು ನಾಂದಿಯೆಂದು ಊಹಿಸಿಕೊಂಡ.

ಕೊಠಡಿಯೆಲ್ಲಾ ಕತ್ತಲು ಆವರಿಸಿತ್ತು. ಕಿಟಕಿಯ ಬಾಗಿಲು ಸಹ ಮುಚ್ಚಿದ್ದರಿಂದ ಕಾರ್ಗತ್ತಲು ಕವಿದುಕೊಂಡಿತ್ತು.

ಬೆಳಕನ್ನು ನೋಡುವ ಸಾಹಸ ಅವರಿಗಿರಲ್ಲ. ಅವರ ಮುಖಗಳನ್ನು ಕಾಂತಿಯುಲ್ಲ ನೋಡುವ ಧೈರ್ಯ ದೀಪಕ್ಕೂ ಇರಲಿಲ್ಲವೇನೋ....

ಮೈಕಲ್ ಸ್ವಿಚ್ ಅಮುಕಿದನು.

ನೂರು ಕ್ಯಾಂಡಲ್ಸ್ ಬಲ್ಬು ಆ ಕೊಠಡಿಯಲ್ಲಿನ ಕಾರ್ಗತ್ತಲನ್ನು ಹೊಡೆದೋಡಿಸಿತು. ನಾಲ್ವರು ಮಿತ್ರರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು.

"ಮಿಸ್ಟರ್ ಮೈಕಲ್ ! ನೀನು ಹೇಳಬೇಕೆಂದಿರುವ ವಿಷಯವನ್ನು ನೇರವಾಗಿ ಹೇಳು. ಸುಮ್ಮನೆ ಬಳಸು ಮಾತು ಏತಕ್ಕೆ ?"

ಮೈಕಲ್‌ನ ಕಡೆಗೆ ತಿರುಗಿ ಕೇಳಿದ ಜಾನ್.

ಆ ಕೊಠಡಿಯಲ್ಲಿದ್ದವರು ನಾಲ್ವರು ಮಾತ್ರ.

ಮೈಕಲ್ ಕುರ್ಚಿ ಬಿಟ್ಟು ಮೇಲಕ್ಕೆದ್ದು ಆ ಕಡೆಯಿಂದ—ಈ ಕಡೆಗೆ ಓಡಾಡತೊಡಗಿದ.

ಕೊಠಡಿಯ ಮಧ್ಯದಲ್ಲಿದ್ದ ಒಂದು ಹಳೆಯ ಮರದ ಮೇಜಿನ ಸುತ್ತಲೂ ಬೆತ್ತದ ಕುರ್ಚಿ ಹಾಕಿಕೊಂಡು ಮಿಕ್ಕ ಮೂವ್ವರೂ ಕುಳಿತಿದ್ದರು.

ಮೇಜಿನ ಮೇಲೆ ಇಸ್ಪೀಟು ಎಲೆ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು ಸೀಜರ್ ಸಿಗರೇಟು ಪ್ಯಾಕೇಟ್, ಮಂಗಳೂರು ಗಣೇಶ ಬೀಡಿಗಳ ಕಟ್ಟು ಒಂದನ್ನು ನೋಡಿ ಮತ್ತೊಂದು ಸಂಜ್ಞೆ ಮಾಡಿಕೊಳ್ಳುತ್ತಿದ್ದವು.

ಫರೀದ್ ಬೀಡಿ ದಮ್ಮು ಎಳೆದು ಬಿಡುತ್ತಿದ್ದನು.

ಸುಂದರ್ ಸಿಗರೇಟು ಸೇವಿಸುತ್ತಿದ್ದನು.

ಜಾನ್ ಹಸಿ ಮೆಣಸಿನ ಕಾಯಿಯ ಬಜ್ಜಿಯನ್ನು ಕಚ್ಚುತ್ತಿದ್ದನು. ಅವನ ಕಣ್ಣುಗಳು ಕೆಂಪೇರಿ ಬೆಂಕಿಯ ಕೆಂಡಗಳಂತಿದ್ದವು. ಅವನು ಖಾಲಿ ಮಾಡಿದ ಬ್ರಾಂದಿ ಶೀಸೆಯೂ ಸಹ ಅವನ ನೋಟಕ್ಕೆ ಹೆದರಿ ಟೇಬಲಿನ ಮೇಲೆ ನಡುಗುತ್ತಾ ನಿಂತಿತ್ತು.

"ಸುಂದರ ನಮ್ಮೆಲ್ಲರಿಗಿಂತಲೂ ಚಿಕ್ಕವನು. ಚುರುಕಾದ ಬಿಸಿರಕ್ತದ ತರುಣ. ಒಂದು ಲಕ್ಷ ರೂಪಾಯಿಗಳು ಅವನ ಕೈಗೆ ಲಭಿಸಿದರೆ ಅವನೇನು ಮಾಡುವನೆಂಬುದು ಕೇಳಿರಿಲ್ಲವೇ ?"

—ಮೈಕಲ್, ಅವರನ್ನುದ್ದೇಶಿಸಿ ಕೇಳಿದ.

"ಹೌದು ಕೇಳಿದೆವು."

ಫರೀದ ಜಾನ್‌ರಿಬ್ಬರೂ ಏಕಕಂಠದಿಂದ ನುಡಿದರು.

"ನಿಮ್ಮನ್ನು ಕೇಳಿದರೂ ಸಹ ನೀವು ಅದೇ ಉತ್ತರವನ್ನು ಹೇಳುವುದರಲ್ಲಿ ಸಂದೇಹವಿಲ್ಲ."

"ನನಗೆ ತಿಳಿದಿದೆ ಪಕ್ಕ ಜೇ ಸಂದ ಕೊನೆಯವರೆಗೆ ಬದುಕುವುದಾಗದು ಕನ್ನಡದಲ್ಲಿ ಗಾದೆಯುಂಟು. ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆಯೇ ಎಂದು ನಾವು ಕೇವಲ ಪರಿಸ್ಥಿತಿ ಒತ್ತಡದಿಂದಲೂ, ಮಾನಸಿಕ ದೌರ್ಬಲ್ಯದಿಂದಲೂ ಧನಿಕ ದರಿದ್ರರೆಂಬ ತಾರತಮ್ಯಗಳಿಂದಲೂ ಮಾನವರು ತುಳಿಯಬಾರದ ತಪ್ಪು ಹಾದಿಯನ್ನು ಅನುಸರಿಸುತ್ತಿದ್ದೇವೆ. ನಾವು ನಾಲ್ವರೂ ಒಂದು ಕೂಟವಾಗಿದ್ದೇವೆ. ಅನೇಕ ಮಾಡಬಾರದ ನೀಚ ಕೃತ್ಯ ಮಾಡುತ್ತಿದ್ದೇವೆ ಹೌದೇ?"

ಅವನ ಕೊನೆಯ ಪ್ರಶ್ನೆಗೆ ಯಾರೂ ಮಾತನಾಡಲಿಲ್ಲ. ಮೌನವಾಗಿ ವೈಕಲ ಹೇಳುವ ಮಾತುಗಳನ್ನು ಆಲಿಸುತ್ತಿದ್ದರು.

ಮತ್ತೆ ವೈಕಲನೇ ಹೇಳತೊಡಗಿದ.

"ಈ ನೀಚ ಕೃತ್ಯಗಳನ್ನೆಲ್ಲಾ ನಾವು ಮನಸ್ಪೂರ್ತಿಯಾಗಿ ಇಷ್ಟಪಟ್ಟು ಮಾಡುತ್ತಿಲ್ಲ; ಬೇರೆ ಗತ್ಯಂತರವಿಲ್ಲದೆ ಮಾಡುತ್ತಿದ್ದೇವೆ. ಆದರೆ ಇದೇ ರೀತಿ ಅದೆಷ್ಟು ಕಾಲ ಮಾಡಬಲ್ಲೆವು."

"ಚಿಕ್ಕ–ಚಿಕ್ಕ ದರೋಡೆಗಳಿಂದ ದೊಡ್ಡ ದೊಡ್ಡ ಫಲಾಪೇಕ್ಷೆಗಳನ್ನು ಸಾಧಿಸಲಾಗುವುದಿಲ್ಲ ಮಾಡುತ್ತಿರುವ ವ್ರತದಲ್ಲಿ ಲಾಭವಿಲ್ಲದಿರುವಾಗ ಅದೆಷ್ಟು ಕಾಲವೆಂದು ಆ ವ್ರತವನ್ನು ಸಹನೆಯಿಂದ ನಡೆಸಬಲ್ಲೆವು? ನೂರು ಸಾವಿರ ಈ ದಿನಗಳಲ್ಲಿ ಏತಕ್ಕೆ ತಾನೇ ಕೆಲಸಕ್ಕೆ ಬರುತ್ತವೆ? ಲಕ್ಷಗಳಿದ್ದರೆ ಮಾತ್ರ ತಕ್ಕಮಟ್ಟಿಗೆ ಜೀವನ ನಡೆಸಬಹುದು....ನಮ್ಮ ಜೀವಿತಗಳಲ್ಲೇ ಒಂದು ಮಧುರವಾದ ಕನಸು ಕಂಡರೆ ಎಷ್ಟು ಚೆನ್ನಾಗಿರುತ್ತದೋ ಊಹಿಸಿಕೊಳ್ಳಿ.

"ಈ ದಿನ ನಮ್ಮ ಕೂಟಕ್ಕೆ ಒಳ್ಳೆಯ ದಿನ ನಮ್ಮ ಜೀವಿತಗಳಿಗೇ ಶುಭ ದಿನ! ಮರೆಯಲಾರದ ಮಹಾಪರ್ವದಿನ."

"ನಮ್ಮ ದಾರಿದ್ರ್ಯ ತೀರಿಹೋಗುವಂತೆ....ನಮ್ಮ ಕಷ್ಟಗಳೆಲ್ಲ ತೀರಿ ಒಂದು ಉತ್ತಮ ಮಾರ್ಗದಲ್ಲಿ ಹೋಗುವಂತೆ....ನಾವು ನಮ್ಮ ಜೀವಿತ ನಂದನ ವನದ ಹಾಗೆ ಬದಲಾಗುವಂತೆ....ನಾವು ಪ್ರತಿದಿನವೂ ಸಹ ಮೃಷ್ಟಾನ್ನ ಭೋಜನ

ಮಾಡುವಂತೆ....ಒಂದು ಅಮೋಘ—ಅದ್ಭುತವಾದ ಪ್ಲಾನ್ ಹಾಕಿದ್ದೇನೆ. ಲಕ್ಷ ಲಕ್ಷಾಂತರ ರೂಪಾಯಿಗಳು ನಮ್ಮ ಹಸ್ತಗತವಾಗುವಂತೆ ಒಂದು ಸರಿಯಾದ ಪ್ಲಾನ್ ಹಾಕಿದ್ದೇನೆ. ನಾವೆಲ್ಲ ಜೊತೆಗೂಡಿ ಆ ಯೋಜನೆಯನ್ನು ಸಾಧಿಸಬೇಕು. ಇದಕ್ಕೆ ನೀವೆಲ್ಲರೂ ಏನು ಹೇಳುವಿರಿ ?"

ಮೈಕಲ್ ಓಡಾಟ ನಿಲ್ಲಿಸಿ ಎಲ್ಲರ ಮುಖಗಳನ್ನೂ ಪರಿಶೀಲನೆಯಿಂದ ನೋಡಿದ.

"ಲಕ್ಷಾಂತರ ರೂಪಾಯಿ ಲಭಿಸುತ್ತದೆಂದರೆ ಯಾರು ತಾನೇ ಬೇಡವೆನ್ನುತ್ತಾರೆ? ಆದರೆ ಆದಕ್ಕಾಗಿ ಅಪಾಯಕೆ ಸಿಲುಕಿಕೊಳ್ಳುವುದು ನನಗೆ ಸ್ವಲ್ಪವೂ ಸಹ ಇಷ್ಟವಿಲ್ಲ."

ಫರೀದ್ ತನ್ನ ನಿರ್ಧಾರವನ್ನು ತಿಳಿಸಿದ.

"ಇದುವರೆವಿಗೂ ನಾವು ಆಕಸ್ಮಾತ್ತಾಗಿ ಪೋಲೀಸರ ಕೈಗೆ ಸಿಕ್ಕಾಗ ನೂರು ರೂಪಾಯಿಗಳ ಜುಲ್ಮಾನೆಯೊಂದಿಗೋ, ಒಂದು ತಿಂಗಳ ಕಾಲ ಸಾಧಾರಣ ಜೈಲು ವಾಸದಿಂದಿಗೋ ನಮ್ಮ ಅಪರಾಧಕ್ಕೆ ಶಿಕ್ಷೆ ಪಡೆಯುತ್ತಿದ್ದೇವೆ. ನೀನು ಹೇಳುತ್ತಿರುವ ನಿನ್ನ ಪ್ಲಾನಿನ ಪ್ರಕಾರವಾದರೆ ಅಜೀವಪರ್ಯಂತ ಕಾರಾಗಾರ ಶಿಕ್ಷೆ ಬೀಳುವಂತಿದೆ. ನಿನ್ನ ಪ್ಲಾನ್ ಅದೇನೆಂಬುದು ಸ್ವಲ್ಪ ಕೂಲಂಕಷವಾಗಿ ಆಲೋಚಿಸಬೇಕಾಗಿದೆ."

ಜಾನ್ ತನ್ನ ಸಂಶಯವನ್ನು ಹೊರಗೆಡುಹಿದ.

"ಮಿಸ್ಟರ್ ಮೈಕಲ್ ಕೇವಲ ಮಾತುಗಳಿಂದ ಪ್ರಯೋಜನವಿಲ್ಲ. ಯೋಜನೆ ಏನೆಂದು ತಿಳಿಸು....ನಾವು ಯಾವಾಗಲಾದರೂ, ಹತ್ತು ಸಾವಿರ ರೂಪಾಯಿಗಳಿಗೆ ಮೀರಿ ಕಳ್ಳತನವಾಗಲೀ ದರೋಡೆಯಾಗಲೀ ಮಾಡಿದ್ದೇವೆಯೇ ?"

—ಎಂದು ಕೇಳಿದ ಸುಂದರ್.

"ಇಲ್ಲ."

"ಈಗ ಲಕ್ಷಾಂತರ ರೂಪಾಯಿ ಕೊಳ್ಳೆ ಹೊಡೆಯಲು ತೀರ್ಮಾನಿಸಿರುವುದು [illegible]ದಂತಾಗುತ್ತದೆ. ನೀನು ಹೇಳುವ ಮಾತು ಚೆನ್ನಾಗಿ ಆಲೋಚಿಸಿ [illegible] ರಂಗಕ್ಕೆ ಇಳಿಯುವುದು ಸೂಕ್ತವೆಂದು ತೋರುತ್ತದೆ."

ಸುಂದರ ಸಿಗರೇಟು ತುಂಡು ನೆಲದ ಮೇಲೆ ಹಾಕಿ ಬೂಟು ಕಾಲಿನಿಂದ ಹೊಸಗುತ್ತಾ ತನ್ನ ಅಭಿಪ್ರಾಯ ತಿಳಿಸಿದ.

"ಡಿಯರ್ ಫ್ರೆಂಡ್ಸ್."

ನಾವು ಇದುವರೆವಿಗೂ ಚಿಕ್ಕ-ಚಿಕ್ಕ ಕಳ್ಳತನಗಳಿಂದಲೇ ಕಾಲ ಕಳೆಯುತ್ತಿರುವುದರಿಂದಲೇ ಈಗ ಈ ಅನುಮಾನಗಳು ಎಲ್ಲೆಲ್ಲೂ ಏರ್ಪಟ್ಟಿವೆ. ಅದೆಷ್ಟು ದಿನಗಳ ಕಾಲ ಇದೇ ರೀತಿ ಕಾಲಕ್ಷೇಪ ಮಾಡುವುದು ? ಇದಕೆ ಅಂತ್ಯವೆಂಬುದು ಇರಲೇಬೇಕಲ್ಲವೆ?? ನಾವೂ ಸಹ ಗೌರವ, ಘನತೆಗಳಿಂದ ಬದುಕಲೇಬೇಕಲ್ಲವೆ??? ಹೇಗೆ ನೀವೆ ಹೇಳಿ....

ಅದಕ್ಕೆ ಬೇಕಾದದ್ದು ಹಣ.

ಆ ಹಣವೊಂದಿದ್ದರೆ ನಾವು ಕಳ್ಳರಲ್ಲ; ದರೋಡೆಕೋರರಲ್ಲ. ರಾಜ್ಯವನ್ನಾಳುವ ನಾಯಕರಾಗುತ್ತೇವೆ. ಗೌರವ, ಘನತೆಗಳು ಲಭಿಸುತ್ತವೆ. ಸರ್ವಸ್ವ ನಮ್ಮ ಕೈ ವಶವಾಗುತ್ತದೆ.

ಕೇವಲ ಒಂದು ಲಕ್ಷ ರೂಪಾಯಿಗಳು ನಮ್ಮ ಬಳಿಯಿದ್ದರೆ ಅಂಗೈಯಲ್ಲಿ ಕೈಲಾಸ ಕಾಣಬಹುದು. ಹಾಲಾಹಲವನ್ನೂ ಸಹ ಅಮೃತವನ್ನಾಗಿ ಮಾಡಿಕೊಂಡು ಕುಡಿಯಬಹುದು. ಹಣವೇ ಗುಣ. ಎಲ್ಲಾ ಹಣದಲ್ಲಿಯೇ ಅಡಗಿವೆ ಅನೇಕ ಮಹತ್ವಗಳು. ಧನಂ ಮೂಲಂ ಇದಂ ಜಗತ್ ಎಂದು ಸಾರಿದ್ದಾರೆ ಹಿರಿಯರು.

"ಈ ದರೋಡೆಯೊಂದನ್ನು ಮಾತ್ರ ಮಾಡಿ ನಮಗೆ ಬೇಕಾದ ಹಣ ನಾವು ಸಂಪಾದಿಸಿಕೊಂಡು—ನಾವೆಲ್ಲರೂ ಸಮ ಪಾಲಾಗಿ ಹಂಚಿಕೊಂಡು, ನಮಗೆ ಇಷ್ಟ ಬಂದ ಒಂದೊಂದು ಮಾರ್ಗ ಅನುಸರಿಸಿ ದೂರ ಸರಿಯೋಣ.

"ನಾನು ಹಾಕಿರುವ ಪ್ಲಾನ್ ಕೇವಲ ಒಂದು ಲಕ್ಷ ರೂಪಾಯಿಯದಲ್ಲ. ಐವತ್ತು ಲಕ್ಷ ರೂಪಾಯಿಗಳಿಗೆ ಪ್ಲಾನ್ ಹಾಕಿದ್ದೇನೆ. ಒಬ್ಬೊಬ್ಬರಿಗೆ ಹತ್ತು ಲಕ್ಷಗಳಂತೆ ಐವರಿಗೆ ಹತ್ತತ್ತು ಲಕ್ಷ ಟೆನ್ ಲಾಕ್ಸ್. ನಮ್ಮ ಕಷ್ಟ ತೀರಿಹೋಗುತ್ತದೆ. ಕಲ್ಪವೃಕ್ಷ ನಮ್ಮ ಮನೆಯ ಹಿತ್ತಲಿಗೇ ಬರುತ್ತದೆ."

ನಾನು ಹೇಳಿದ ಮಾತುಗಳು ಲಕ್ಷ್ಯವಿಟ್ಟು ಕೇಳಿದಿರಾ ?

ಐವತ್ತು ಲಕ್ಷಗಳು ಫಿಫ್ಟಿ ಲಾಕ್ಸ್.

ಆ ಮೂವರೂ ಮಿತ್ರರ ಹೃದಯಗಳು 'ಡವ ಡವ'ನೆ ಬಡಿದುಕೊಳ್ಳತೊಡಗಿದವು. ಅವರ ಊಹೆಗೇ ಎಟುಕದ ದೊಡ್ಡ ಗಂಟನ್ನು ಕುರಿತು ಮೈಕಲ್ ಮಾತುಗಳಲ್ಲಿ ಹೇಳುತ್ತಿದ್ದನು.

ಅವರ ಮುಖಗಳಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು ಆಸಕ್ತಿಯಿಂದ ಗಮನಿಸಿದ ಮೈಕಲ್.

ಎಲ್ಲರಲ್ಲಿಯೂ ಯಾವುದೋ ಅರಿಯದ ಮೌನ ಆವರಿಸಿಕೊಂಡಿತು.

ಎರಡು ನಿಮಿಷ ಉರುಳಿದವು.

"ಇಷ್ಟಕ್ಕೂ ನೀನು ಹೇಳುತ್ತಿರುವುದು ಆ ಇಂಡಿಯನ್ ಏಜನ್ಸಿ ಟ್ರಂಕ್‌ನ ವಿಷಯವಲ್ಲ ತಾನೇ?"

ಸಂದೇಹದಿಂದ ಕೇಳಿದ ಸುಂದರ.

"ಎಗ್ಜಾಕ್ಟ್ಲೀ—ನೀನು ಸರಿಯಾಗಿ ಊಹಿಸಿ ಹೇಳಿದೆ ಸುಂದರ. ಆ ಟ್ರಂಕಿನಲ್ಲಿರುವುದು ಕರೆಕ್ಟಾಗಿ ಐವತ್ತು ಲಕ್ಷ ರೂಪಾಯಿ. ಎಲ್ಲ ಚಿಲ್ಲರೆ ನೋಟುಗಳು. ಸುಲಭವಾಗಿ ಹಂಚಿಕೊಳ್ಳಬಹುದು. ಸರಳವಾಗಿ ಚಲಾವಣೆ ಮಾಡಬಹುದು. ಪ್ರಪಂಚವನ್ನು ಪ್ಯಾಂಟಿನ ಜೇಬಿನಲ್ಲಿಟ್ಟುಕೊಂಡು ನಮಗೆ ಇಷ್ಟ ಬಂದಂತೆ ಆನಂದವಾಗಿ ತಿರುಗಬಹುದು. ನಾವು ಮಾಡಬೇಕಾದ ಕೆಲಸವೆಲ್ಲಾ ಆ ಅದೃಷ್ಟ ದೇವತೆಯನ್ನು ಆಲಿಂಗಿಸಿಕೊಳ್ಳುವುದೊಂದೇ ..."

"ಮುದ್ದಾಗಿದೆಯೆಂದು ದೀಪವನ್ನು ಮುಟ್ಟಿಸಹೋದರೆ ನಮ್ಮ ಮುಖವೇ ಸುಡುತ್ತದೆ."

ಮೈಕಲ್‌ನ ಮಾತುಗಳಿಗೆ ಆತಂಕ ವ್ಯಕ್ತಪಡಿಸಿದ ಫರೀದ.

ತೊಂದರೆಯಿಲ್ಲದೇ ಹೆಚ್ಚಿನ ಲಾಭ ಪಡೆಯುವುದು ಈಗಿನ ಕಾಲದಲ್ಲಿ ಸಾಧ್ಯವಿಲ್ಲ ಅಲ್ಲವೇ?

ನಗುತ್ತಾ ಫರೀದನ ಭುಜ ತಟ್ಟಿದ ಮೈಕಲ್.

"ಇಷ್ಟಕ್ಕೂ ನಮ್ಮ ಕೂಟದಲ್ಲಿರುವ ಆ ಐದನೇ ಭಾಗಸ್ಥನಾರೆಂಬುದು ಹೇಳಲೇ ಇಲ್ಲ."

ಜಾನ್ ತನ್ನ ಜೊತೆಗೆ ಪಾಲಿಗೆ ಬರುವ ಆ ಹೊಸ ವ್ಯಕ್ತಿ ಯಾರು ಎಂದು ತಿಳಿದುಕೊಳ್ಳುವ ಕುತೂಹಲ ವ್ಯಕ್ತಪಡಿಸಿದನು.

ಮೈಕಲ್ ಮತ್ತೊಂದು ಸಾರಿ ನಕ್ಕನು.

"ಮೈ ಡಿಯರ್ ಫ್ರೆಂಡ್ಸ್....ನಿಮ್ಮೆಲ್ಲರ ಅನುಮಾನ ಏನೆಂಬುದು ನನಗೆ ಚೆನ್ನಾಗಿ ಅರ್ಥವಾಗಿವೆ. ನೀವೇನೂ ಬಹಳ ಗಾಬರಿ ಪಡಬೇಕಿಲ್ಲ. ನಿಮ್ಮ ಸಾಹಸ ಶಕ್ತಿ ಎಂತಹವೆಂಬುದು ನಿಮಗೇ ತಿಳಿಯದೆ ಬಹಳ ಭಯ ಪಡುತ್ತಿರು

ವಿರಿ. ನಿಮಗುಂಟಾಗುವ ಎಲ್ಲಾ ಗಂಡಾಂತರಗಳಿಂದ ಕಾಪಾಡಲು ನಾನಿದ್ದೇನೆ. ಭಯಪಡಬೇಡಿ. ಧೈರ್ಯದಿಂದ ಮುಂದೆ ಸಾಗೋಣ. ವಿಜಯ ಲಕ್ಷ್ಮಿಯನ್ನು ಕೈ ಹಿಡಿಯೋಣ ಈ ಪ್ರಪಂಚಕ್ಕೇ ನಮ್ಮ ಸಾಹಸ ತೋರಿಸೋಣ ಅಟ್ಟಹಾಸದಿಂದ ಮೆರೆಯೋಣ—”

ಮೈಕೆಲ್‌ನು ಬೀರುವಿನ ಬಾಗಿಲು ತೆರೆದು ವಿಸ್ಕಿ ಬಾಟಲ್ ಹೊರಕ್ಕೆ ತೆಗೆದ. ಅದರ ಮುಚ್ಚಳ ಬಾಯಿಂದ ಕಳಚಿದ. ಬಾಟಲನ್ನೇ ಎತ್ತಿ ಅರ್ಧ ಭಾಗ ಬಾಯಿಗೆ ಸುರಿದುಕೊಂಡು ಗಂಟಲು ಸರಿಪಡಿಸಿಕೊಂಡ. ಅನಂತರ ಉದ್ರೇಕದಿಂದ ಹೇಳತೊಡಗಿದ.

“ಡಿಯರ್ ಬಾಯ್ ಸುಂದರ್—”

ನಿನ್ನ ಶರೀರದಲ್ಲಿ ಹೊಸ ಬಿಸಿ ರಕ್ತ ಹರಿಯುತ್ತಿದೆ. ನಿನ್ನ ತಲೆಯಲ್ಲಿ ಹೊಳೆಯುವ ಆಲೋಚನೆಗಳು ವಿವೇಕ ವಿಜ್ಞಾನಗಳಿಂದ ಕೂಡಿಕೊಂಡಿವೆ. ಶಾಲೆಯಲ್ಲಿ ನಿನಗೆ ಮೊದಲ ಅಂಕಗಳು ಲಭಿಸಿದವು. ಆದರೆ ಜೀವಿಸುವುದನ್ನು ಕಲಿಯಲು ಮುನ್ನುಗ್ಗಿದಾಗ ಕೊನೆಯ ಅಂಕಗಳು ಮಾತ್ರ ಸಿಕ್ಕಿದವು. ನಿಜವಾದ ಪ್ರಪಂಚವೇನೆಂಬುದು ಆಗ ನಿನಗೆ ಚೆನ್ನಾಗಿ ಅರ್ಥವಾಯಿತು. ನಿರುದ್ಯೋಗ ನಿನಗೆ ಅನೇಕ ಕಲಿಸಿತು. ಹಸಿವು ನಿನ್ನ ಕೈಯಿಂದ ತಮಾಷೆಯಾಗಿ ತಪ್ಪು ಮಾಡಿಸಿತು ನೀನು ಸಹೃದಯತೆಯಿಂದ ಮಾಡಿದ ಸಹಾಯ ನಿನಗೇ ಎದುರೇಟು ಕೊಟ್ಟಾಗ ನಿನಗೆ ನಿಜವಾದ ಪ್ರಪಂಚವೇನೆಂಬುದು ಅರ್ಥವಾಯಿತು. ಆಗ್ಗೇ ನೀನು ಬಹಳ ಕೈ ಸುಟ್ಟುಕೊಂಡಿದ್ದೆ. ತಣ್ಣೀರಿನಲ್ಲಿ ಕೈಯಿಟ್ಟರೆ ಏನು ಪ್ರಯೋಜನ?

ಅಕಸ್ಮಾತ್ತಾಗಿ ನನ್ನ ಕಣ್ಣಿಗೆ ಬಿದ್ದೆ. ಹೊಸ ಪ್ರಪಂಚದೊಳಕ್ಕೆ ಅಡಿಯಿಟ್ಟೆ. ಮೂರು ವರ್ಷಗಳಿಂದಲೂ ಯಾವ ಆತಂಕ ಇಲ್ಲದೇ ಆನಂದದಿಂದ ಜೀವಿಸುತ್ತಿದ್ದೇವೆ. ನಾನು ನಿನಗೆ ಡ್ರೈವಿಂಗ್ ಕಲಿಸಿದೆ. ಡ್ರೈವಿಂಗ್‌ನಲ್ಲಿ ನಿನ್ನನ್ನು ಮೀರಿಸುವ ಎಕ್ಸ್‌ಪರ್ಟ್ ಈ.ಪ್ರಪಂಚದಲ್ಲಿಯೇ ಯಾರೂ ಇಲ್ಲವೆಂದು ಹೇಳಬಹುದು ನಿನಗೆ ಇನ್ನೂ ಮದುವೆಯಾಗಿಲ್ಲ. ಹಣದ ಅವಶ್ಯಕತೆ ಎಲ್ಲರಿಗಿಂತಲೂ ನಿನಗೇ ಹೆಚ್ಚಾಗಿದೆ. ನೀನು ಸ್ವಲ್ಪವೂ ಅನುಮಾನಿಸಬೇಡ ನಾನು ಡೈರೆಕ್ಟ್ ಮಾಡುತ್ತೇನೆ. ಆ ಟ್ರಕ್‌ನ್ನು ದರೋಡೆ ಮಾಡೋಣ. ನಾವು ಊಹಿ

ಸಿಕೊಂಡಿದ್ದನ್ನೆಲ್ಲ ಸಾಧಿಸೋಣ ಡೋಂಟ್ ಫಿಯರ್? ಏ ಯೂ ಮ್ ಹಿಯರ್—"

ಎಂದು ಹೇಳಿ ಫರೀದನ ಕಡೆ ತಿರುಗಿದ.

ಫರೀದ್ ಜೀ—

"ನಿನ್ನಲ್ಲಿ ಹಠ ಸಾಧನೆಯಿದೆ. ನಲವತ್ತು ವರ್ಷ ಮೀರಿದ್ದರೂ ನಿನ್ನಲ್ಲಿ ಸ್ವಲ್ಪವೂ ಶಕ್ತಿ ಕುಂದಿಲ್ಲ. ವೆಲ್ಡಿಂಗ್, ಫಿಟ್ಟಿಂಗ್ ನಿನಗೆ ಚೆನ್ನಾಗಿ ತಿಳಿದಿದೆ. ನೀನು ರಹಸ್ಯ ಮೆಕ್ಯಾನಿಕ್. ಇಂಜನಿಯರಿಂಗ್ ವಿದ್ಯೆಗಳಲ್ಲಿ ನಿನಗೆ ತಿಳಿಯದೇ ಇರುವುದು ಯಾವುದೂ ಇಲ್ಲ. ನೀನು ತೆರೆಯದೇ ಇರುವ ಕಬ್ಬಿಣದ ಪೆಟ್ಟಿಗೆಗಳಿಲ್ಲ. ನಿನ್ನಂತಹ ಎಕ್ಸಪರ್ಟ್ ನನ್ನ ಕೈ ಕೆಳಗಡೆಯಿರುವಾಗ ಸಾಧಿಸಲಾರದ್ದಾವುದೂ ಇಲ್ಲ. ಫಾರ್ವರ್ಡ್ ಮಾರ್ಚ್—ಮುಂದೆ ಸಾಗೋಣ."

"ಮಿಸ್ಟರ್ ಜಾನ್—ಎಂತೆಂತಹ ವೀರಾಧಿವೀರರನ್ನೋ ನೋಡಿದೆವು. ಎಂತೆಂತಹ ಜಗತ್ ಕಿಲಾಡಿಗಳನ್ನು ಮಣ್ಣು ಮುಕ್ಕಿಸಿದೆವು. ಅನೇಕ ಮೋಸ ಮೋಸಗಳಿಂದಲೇ ಜಯಿಸಿದ್ದೇವೆ. ಕಣ್ಣುಗಳಿಗೆ ಖಾರ ಚೆಲ್ಲಿ ಅಂಗಡಿಗಳಲ್ಲಿನ ಆಹಾರ ಪದಾರ್ಥಗಳನ್ನೂ ಸಹ ಅಪಹರಿಸಿದ್ದೇವೆ. ಅನೇಕ ಚಾಣಾಕ್ಷ ತಂತ್ರಗಳನ್ನು ನಡೆಸಿದ ಮಹಾ ಮೇಧಾವಿಗಳು ನಾವು. ಐವತ್ತು ಲಕ್ಷ ರೂಪಾಯಿಗಳನ್ನು ನಮ್ಮ ಹಸ್ತಗತ ಮಾಡಿಕೊಳ್ಳೋಣ. ಎಲ್ಲರೂ ಸಮನಾಗಿ ಭಾಗ ಮಾಡಿಕೊಳ್ಳೋಣ ಏನು ಹೇಳುವಿ—? ಈಗ ನಿಮ್ಮೆಲ್ಲರ ಮನಸ್ಸಿನ ಅಭಿಪ್ರಾಯವೇನೆಂಬುದು?"

ಎಲ್ಲರ ಮುಖಗಳನ್ನು ಪರಿಶೀಲನೆಯಿಂದ ನೋಡುತ್ತಾ ಕೇಳಿದ ಮೈಕಲ್.

"ರಿಜರ್ವ ಬ್ಯಾಂಕ್ ಬೀಗದ ಕೊಳ್ಳಿ ಹೊಡೆಯಬಹುದೇನೋ? ಆದರೆ ಆ ಇಂಡಿಯಾ ವಿಜನ್ಸಿನ ಬ್ರೀಫನ್ನು ಮುಟ್ಟಲು ಸಹ ಸಾಧ್ಯವೇ?—ಎಂಬುದೇ ನನ್ನ ಸಂದೇಹ."

ಮೆಲ್ಲನೆ ಹೇಳಿದ ಸುಂದರ.

"ಅಸಹಕಾರದ ಮಾತುಗಳನ್ನಾಡಬೇಡ ಸುಂದರ! ಮೈಕಲ್ ನಿನ್ನ ಶತ್ರುವೇನೂ ಅಲ್ಲ. ಯಾವುದೋ ಒಂದು ದೊಡ್ಡ ಪ್ಲಾನಿಲ್ಲದೆ ಆ ಪ್ರಸ್ತಾಪನೆ ತಂದು ನಮ್ಮ ಮುಂದೆ ಪ್ರದರ್ಶಿಸುತ್ತಿಲ್ಲ. ಅವನು ಹೇಳುವುದನ್ನು ಸಂಪೂರ್ಣವಾಗಿ ಕೇಳು."

—ಎಂದು ಹೇಳಿದ ಜಾನ್.

"ಸುಂದರ ಹೇಳುವುದರಲ್ಲಿಯೂ ಸತ್ಯವಿದೆ. ಯಾವುದನ್ನಾದರೂ ಕೊಳ್ಳೆ ಹೊಡೆಯಬಹುದೆಂಬ ಧೈರ್ಯವೊಂದಿದ್ದರೆ ಸಾಲದು. ಅದರಲ್ಲಿ ಸ್ವಲ್ಪ ಯುಕ್ತಿಯೂ ಇರಬೇಕು. ಆ ಇಂಡಿಯಾ ಏಜನ್ಸಿಸ್ ಟ್ರಕ್‌ನ್ನು ಕುರಿತು ಸುಂದರನಿಗೆ ಬಹಳ ಚೆನ್ನಾಗಿ ತಿಳಿದಿದೆ. ಮೊದಲು ಅವನಿಗೆ ತಿಳಿದ ವಿಷಯಗಳು ವಿಸ್ತಾರವಾಗಿ ತಿಳಿಯ ಹೇಳಲಿ ಅನಂತರ ಅವನು ಹೇಳಿದ್ದನ್ನು ಕುರಿತು ಚೆನ್ನಾಗಿ ಆಲೋಚಿಸೋಣ"

—ಎಂದು ಹೇಳಿ ಸುಂದರನ ಹೇಳಿಕೆಯನ್ನು ಸಮರ್ಥಿಸಿದ ಫರೀದ್

ಸುಂದರ ಆ ಮೂವರ ಕಡೆಗೂ ಮತ್ತೊಮ್ಮೆ ನೋಡಿದ.

"ಹೌದು ಹೇಳು ಸುಂದರ್ ನಿನ್ನ ಫ್ರೆಂಡ್ ಒಬ್ಬ ಆ ಟ್ರಕ್ಕಿಗೆ ಡ್ರೈವರನಾಗಿ ಕೆಲವು ಕಾಲ ಕೆಲಸ ಮಾಡುತ್ತಿದ್ದನೆಂದು ಹಿಂದೆ ಒಂದು ಸಾರಿ ತಿಳಿಸಿದ್ದೆ ಆ ನಿನ್ನ ಸ್ನೇಹಿತನಿಂದ ಆ ಟ್ರಕ್ ವಿಷಯ ನೀನು ಚೆನ್ನಾಗಿ ತಿಳಿದುಕೊಂಡಿರಬಹುದು. ಅವನಿಂದ ತಿಳಿದುಕೊಂಡಿರುವ ವಿಷಯಗಳನ್ನು ನಿಸ್ಸಂಕೋಚವಾಗಿ ಹೇಳು."

—ಎಂದು ಮೈಕಲ್ ತಾನೂ ಸಹ ಒಂದು ಬೆತ್ತದ ಕುರ್ಚಿ ಎಳೆದುಕೊಂಡು ಟೇಬಲ್ಲಿನ ಮುಂದೆ ಕುಳಿತುಕೊಂಡನು.

ಸುಂದರ್ ಸಿಗರೇಟು ಬೆಳಗಿಸಿ ಎರಡು ದಮ್ಮು ಜೋರಾಗಿ ಎಳೆದು ಹೊಗೆಯುಗುಳಿ ಹೇಳತೊಡಗಿದನು.

"ಇಲ್ಲಿಗೆ ಸುಮಾರು ನೂರು ಮೈಲಿಗಳ ದೂರದಲ್ಲಿ ರಷ್ಯಾದವರ ಆರ್ಥಿಕ ಸಹಾಯದಿಂದ ಮಂಚನ ಬೆಲೆ ಪ್ರಾಜೆಕ್ಟ್ ಕಟ್ಟಲ್ಪಡುತ್ತಿದೆ. ಆ ಪ್ರಾಜೆಕ್ಟ್ ಪೂರ್ತಿಯಾದರೆ ಪ್ರವಾಹ ನಿಯಂತ್ರಣ ಹಾಗೂ ಐದು ಲಕ್ಷ ಎಕರೆ ನೀರಾವರಿ ಸಾಗುವಳಿಗೆ ಉಪಯೋಗುವಾಗುತ್ತದೆ. ಇದಕ್ಕೆ ಕೆಲವು ಕೋಟಿ ರೂಪಾಯಿ ಖರ್ಚಾಗುತ್ತದೆ. ಅಲ್ಲಿನ ಕೆಲಸ ಪ್ರಾರಂಭವಾಗಿ ಮೂರು ವರ್ಷಗಳಾಯಿತು. ಆ ಪ್ರಾಜೆಕ್ಟ್ ಪೂರ್ಣಗೊಳಿಸಲು ಇನ್ನೂ ಎರಡು ವರ್ಷಗಳು ಹಿಡಿಯಬಹುದು. ಪ್ರತಿ ತಿಂಗಳೂ ಎರಡು ಸಾರಿ ಬ್ಯಾಂಕ ಆಫ್ ಮೈಸೂರಿನಿಂದ ಅಲ್ಲಿನ ಬ್ರಾಂಚ್ ಆಫೀಸ್ ಟ್ರೆಜರಿಗೆ ಹಣ ಕಳಿಸಲ್ಪಡುತ್ತದೆ. ಮೊದಲಲ್ಲಿ ಆ ಹಣ ಒಂದು ವ್ಯಾನಿನಲ್ಲಿ ಕಳಿಸಲ್ಪಡುತ್ತಿತ್ತು. ಆ ವ್ಯಾನನ್ನು ಇನರ್ರ‍್ಯು ಮಾಡುತ್ತಿದ್ದರು. ವ್ಯಾನಿಗ

ನಾಲ್ಕು ಕಡೆಗಳಲ್ಲಿಯೂ ಬಂದೂಕಧಾರಿಗಳಾದ ರಿಜರ್ವ ಪೋಲೀಸರು ಫಾಲೋ ಮಾಡಿಕೊಂಡು ಬರುತ್ತಿದ್ದರು. ಆದರೆ ಒಂದು ವರ್ಷದ ಹಿಂದಿನಿಂದ ತಿಂಗಳಿಗೆ ಒಂದು ಸಾರಿ ಮಾತ್ರ ಹಣ ಕಳಿಸಲ್ಪಡುತ್ತಿದೆ ಅದರಲ್ಲಿ ಬರುವ ಹಣವೆಲ್ಲಾ ಚಿಲ್ಲರೆ ನೋಟುಗಳು ಏಕೆಂದರೆ ಅದೆಲ್ಲಾ ಕೂಲಿಯವರ ಸಂಬಳ ಹಂಚುವುದಕ್ಕಾಗಿಯಾದ್ದರಿಂದ ಎಲ್ಲಾ ಚಿಲ್ಲರೆಯೇ ಬರುತ್ತದೆ.

ಇಂಡಿಯಾ ಏಜನ್ಸೀಸ್ ಎಂಬ ಸಂಸ್ಥೆ ಇಲ್ಲಿಂದ ಅಲ್ಲಿಗೆ ಹಣ ಕಳಿಸಲು ಕಂಟ್ರಾಕ್ಟ ತೆಗೆದುಕೊಂಡಿದೆ. ಆ ಸಂಸ್ಥೆ ಪ್ರಚಾರಕ್ಕಾಗಿ ಆ ಟ್ರಕ್ಕನ್ನು ಸ್ಪೆಷಲಾಗಿ ತಯಾರು ಮಾಡಿಸಿದೆ. ಆ ಟ್ರಕ್ಕನ್ನು ಒಂದು ವಿಧವಾದ ವಿಶೇಷ ಲೋಹದಿಂದ ತಯಾರಿಸಲಾಗಿದೆ. ಆ ಟ್ರಕ್ಕನ್ನು ಒಡೆಯುವದಕ್ಕಾಗಲಿ ಕರಗಿಸುವುದಕ್ಕಾಗಲಿ ಅವಕಾಶವಿಲ್ಲ. ಒಂದೇ ಸಮನೆ ಒಂದು ತಿಂಗಳು ಕಾಲ ಕುಲುಮೆಯಲ್ಲಿ ಕರಗಿಸಲೇನಾದರೂ ಪ್ರಯತ್ನಿಸಿದರೆ ಏನಾದರೂ ಪ್ರಯೋಜನ ಸಿದ್ಧಿಸುವುದೇನೋ....ಆ ಟ್ರಕ್ಕನ್ನು ಒಂದು ವರ್ಷದ ಹಿಂದೆ ರಷ್ಯಾದಿಂದ ತರಿಸಲಾಗಿದೆ.

ಆ ಟ್ರಕ್‌ನಲ್ಲಿ ಹೇಳಿಕೊಳ್ಳುವಂತಹುದು ಡೋರ್, ಇದಕ್ಕೆ ಟೈಮು ಲಾಕ್ ಸಿಸ್ಟಮ್ ಕಂಟ್ರೋಲ್ ಮಾಡಲ್ಪಟ್ಟಿದೆ. ಟ್ರಕ್ಕಿಗೆ ಹಣ ತುಂಬುತ್ತಲೇ ಲಾಕ್ ಫಿಕ್ಸ ಮಾಡಲ್ಪಡುತ್ತದೆ. ಟ್ರಕ್ ಪ್ರಾಜೆಕ್ಟನಲ್ಲಿನ ಬ್ಯಾಂಕ್ ಬ್ರಾಂಚ್ ಟ್ರಿಜರಿಗೆ ಸೇರಿಕೊಳ್ಳಲು ನಾಲ್ಕು ಗಂಟೆ ಕಾಲ ಹಿಡಿಯುತ್ತದೆ. ಇಲ್ಲಿನ ಬ್ಯಾಂಕಿನಿಂದ ಹೊರಟನಂತರ ಟ್ರಾಫಿಕ್ ಜಾಮುಗಳೆಲ್ಲವನ್ನೂ ತಪ್ಪಿಸಿಕೊಂಡು ತನ್ನ ಸ್ಥಳ ಸೇರಿಕೊಳ್ಳಲು ಒಂದೊಂದು ಸಾರಿ ಲೇಟ್ ಆದರೂ ಆಗಬಹುದು. ಆದುದರಿಂದ ಐದು ಗಂಟೆಗಳ ನಂತರ ಟೈಮ್ ಲಾಕನ್ನು ಆಪರೇಟ್ ಮಾಡಿ ಡೋರನ್ನು ತೆರೆಯಲು ಅವಕಾಶ ಕಲ್ಪಿಸಿದ್ದಾರೆ.

"ಡ್ಯಾಷ್ ಬೋರ್ಡ್ ಬಳಿ ಒಂದು ಬಟನ್ ಇದೆ. ಅದು ಟೈಮ್ ಲಾಕನ್ನು ಕಂಟ್ರೋಲ್ ಮಾಡುತ್ತಿರುತ್ತದೆ. ತೊಂದರೆ ಏನಾದರೂ ಸಂಭವಿಸಿತೆಂದರೆ, ಕೂಡಲೇ ಡ್ರೈವರ್ ಆ ಬಟನ್ ಅಮುಕುತ್ತಾನೆ. ಟೈಮ್ ಲಾಕ್ ಕೆಟ್ಟು ಹೋಗುತ್ತದೆ...."

ಜಾನ್ ಫರೀದರಿಬ್ಬರೂ ಸುಂದರನ ಕಡೆಗೆ ಉತ್ಸುಕತೆಯಿಂದ ನೋಡುತ್ತ ಅವನು ಹೇಳುತ್ತಿದ್ದುದನ್ನು ಆಲಿಸುತ್ತಿದ್ದರು.

ಒಂದು ಸಾರಿ ಆ ಲಾಕನ್ನು ಕೆಡಿಸಿದರೆ ಆದನ್ನು ಸರಿಪಡಿಸಲು ಆ ಟ್ರಕ್ಕ್ ತಯಾರಿಸಿದ ಕಂಪನಿಯಿಂದ ತಜ್ಞ ಪರೀಕ್ಷಕನೇ ಬರಬೇಕಾಗುತ್ತದೆ. ಆ ಕಂಪನಿಯವರ ವಿನಃ ಬೇರೆ ಯಾರಿಂದಲೂ ಅದು ಸರಿಪಡಿಸಲು ಸಾಧ್ಯವಾಗುವ ಕೆಲಸವಲ್ಲ. ಅಲ್ಲದೇ ಡ್ರೈವರ್ ಬಳಿಯಲ್ಲಿಯೇ ವೈರ್‌ಲೆಸ್ ಸೆಟ್ ಇರುತ್ತದೆ. ಟ್ರಕ್ ಬ್ಯಾಂಕ್‌ನಿಂದ ಹೊರಟ ಪ್ರಾರಂಭದಿಂದಲೂ, ಟ್ರೆಜರಿ ಬ್ರಾಂಚಿಗೆ ಸೇರುವವರಿಗೂ ಕಂಟಿನ್ಯೂ ಆಗಿ ಇಂಡಿಯಾ ಏಜನ್ಸಿಯೊಂದಿಗೆ ಕನೆಕ್ಷನ್ ಇರುತ್ತದೆ.

ಯಾವೋನಾದರೂ ನಮ್ಮಂತೆಯೇ ಆ ಟ್ರಕ್‌ನ್ನು ಅಡ್ಡ ಹಾಕಿ ದರೋಡೆ ಮಾಡಬೇಕೆಂದು ಪ್ರಯತ್ನಿಸಿದರೆಂದರೆ....ಏನು ನಡೆಯುತ್ತದೆಂದು ತಿಳಿದಿದೆಯೇ? ಡ್ರೈವರ್ ಗಾರ್ಡರಿಬ್ಬರೂ ತಮ್ಮ ರೂಟಿನ್ ಬಿಜಿನೆಸ್ ಪ್ರಾರಂಭಿಸುತ್ತಾರೆ.

ಡ್ರೈವರ್ ಬಟನ್ ಅಮುಕುತ್ತಾನೆ. ಟೈಮ್ ಲಾಕ ಕೆಟ್ಟುಹೋಗುತ್ತದೆ ಆತನ ಪಕ್ಕದಲ್ಲಿಯೇ ಕುಳಿತಿರುವ ಗಾರ್ಡ ತನ್ನ ಮುಂದಿರುವ ಎರಡು ಸ್ವಿಚ್‌ಗಳಲ್ಲಿ ಒಂದು ಸ್ವಿಚ್ ಅಮುಕುತ್ತಾನೆ. ಅದರಿಂದ ಅವರು ಕುಳಿತಿರುವ ಮುಂಭಾಗದಲ್ಲಿರುವ ಕಿಟಕಿಗಳು ಮುಚ್ಚಿಕೊಂಡು. ಟ್ರಕ್ಕ ಒಂದು ಲೋಹದ ಪೆಟ್ಟಿಗೆಯಂತಾಗುತ್ತದೆ. ಮತ್ತೊಂದು ಸ್ವಿಚ್ ಅಮುಕಿದರೆ ವೈರ್‌ಲೆಸ್ ಸೆಟ್ ಏಜನ್ಸಿಗೆ ಅಪಾಯದ ಸಿಗ್ನಲ್ ನೀಡುತ್ತದೆ. ಅದರಲ್ಲಿನ ಗಂಟೆಯೊಂದು ಅಪಾಯ ಸೂಚಕವಾಗಿ ಜೋರಾಗಿ ಮೊಳಗಲಾರಂಭಿಸುತ್ತದೆ. ಆ ಗಂಟೆಯ ನಾದದಿಂದ ಆ ಏಜನ್ಸಿಗಿಂತಲೂ ಮೊದಲೇ ಅಕ್ಕ ಪಕ್ಕದ ಪೋಲಿಸರಿಗೆ ಆ ಟ್ರಕ್ ಅಪಾಯದಲ್ಲಿ ಸಿಲುಕಿಕೊಂಡಿರುವುದೆಂದು ಗ್ರಹಿಸಲು ಬಹಳ ಸುಲಭವಾಗುತ್ತದೆ. ಒಂದು ಸಾರಿ ಮೂರು ಬಟನ್‌ಗಳನ್ನು ಅಮುಕಿ ಪೂರ್ಣಗೊಳಿಸಿದರೆ ಅವರು ಹಾಗೆಯೇ ಸ್ಟೀರಿಂಗ್ ಮುಂದಕ್ಕೆ ನಿರೀಕ್ಷಿಸುತ್ತಾ ಕುಳಿತುಕೊಳ್ಳುವುದೊಂದೇ ಮಾರ್ಗ ಅವರಿಗಂತೂ ಯಾವ ಅಪಾಯವೂ ಸಂಭವಿಸುವುದಿಲ್ಲ. ನಾನು ಹೇಳಿದ್ದು ಚೆನ್ನಾಗಿ ಕೇಳಿದಿರಾ? ಈ ವಿಷಯ ಸತ್ಯವೆಂದು ಈಗಲಾದರೂ ನಂಬುವಿರೆಂದು ನನ್ನ ಭಾವನೆ. ಇದ್ದ ವಿಷಯವನ್ನು ಕೂಲಂಕುಷವಾಗಿ ತಿಳಿಸಿದ್ದೇನೆ....

ಎಲ್ಲಾ ವಿಷಯಗಳನ್ನೂ, ವಿಷದವಾಗಿ ಹೇಳಿ ಮುಗಿಸಿದ ಸುಂದರ.

"ಆ ಟ್ರಕ್ಕಿನ ಡ್ರೈವರನನ್ನೂ ಗಾರ್ಡನನ್ನೂ ನಮ್ಮ ಬಲೆಗೆ ಎಳೆದುಕೊಂಡರೆ?"

—ಎಂದು ಕೇಳಿದ ಮೈಕಲ್.

"ಇಂಪಾಸಿಬಲ್."

ಸುಂದರ ಹೇಳಿದ.

"ಐದನೇ ಒಂದು ಭಾಗ ಅವರಿಗೆ ಕೊಡೋಣ."

ಜಾನ್ ಒಂದು ಜೋಕ ಬೀಸಿದ.

"ಅವರು ನಮ್ಮಂತಹ ನೀಚರಲ್ಲ."

ಸುಂದರ ಪೌರುಷದಿಂದ ಹೇಳಿದ.

ಪರಿಸ್ಥಿತಿ ಹದಗೆಡುತ್ತದೆಂದು ಮೈಕಲ್ ಗ್ರಹಿಸಿದ.

"ಸುಂದರ ಇಂಪಾಸಿಬಲ್ ಎಂದು ನೀನು ಏತಕ್ಕೆ ಹೇಳುತ್ತಿರುವೆಯೋ ಅದನ್ನು ವಿವರಿಸಿ ಹೇಳು."

—ಎಂದು ಕೇಳಿದ.

"ಆ ಟ್ರಕ್ಕಿನಲ್ಲಿ ಇರುವವರು ಯಾರೆಂಬುದು ನನಗೆ ಚೆನ್ನಾಗಿ ತಿಳಿದಿದೆ. ಡ್ರೈವರನ ಹೆಸರು ಕೃಷ್ಣಸಿಂಗ್. ಗಾರ್ಡನ ಹೆಸರು ಸೈಯದ್. ಅವರಿಬ್ಬರೂ ಶಕ್ತಿಶಾಲಿಗಳಾದ ಹಟವಾದಿಗಳು. ಷೂಟಿಂಗ್‌ನಲ್ಲಿ ಬಹು ಜಾಣ್ಮೆಯುಳ್ಳವರು. ಇಬ್ಬರ ಬಳಿಯೂ ಪಿಸ್ತೂಲು ರೆಡಿಯಾಗಿರುತ್ತವೆ. ದರೋಡೆಯೇನಾದರೂ ನಡೆದರೆ ಅವರು ಕೆಲಸಕ್ಕೆ ಸೇರುವ ಮೊದಲು ಕಟ್ಟಿರುವ ಡಿಪಾಜಿಟನ್ನು ಏಜನ್ಸಿ ಖೋತಾ ಮಾಡುತ್ತದೆ. ಬೋನಸ್ಸನ್ನು ಸಹ ಕೊಡುವದಿಲ್ಲ. ತಮ್ಮ ಕರ್ತವ್ಯವನ್ನು ಕ್ರಮವಾಗಿ ನಡೆಸಿಕೊಂಡು ಬಂದರೆಂದರೆ ಲಾಭವಿದೆ ತಾನಾಗಿಯೆ ಬಯಸಿ ಬೆಂಕಿಯ ಹೋಮ ಕುಂಡದೊಳಕ್ಕೆ ತಲೆಯಿಡಲಾರರು. ಹುಲಿಯ ಬಾಯಿಗೆ ಸಿಲುಕಲು ಯಾರೂ ಮುನ್ನುಗ್ಗಲಾರರು. ಅವರು ನಮಗೆ ವಶರಾಗುವುದು ಬಹಳ ಕಷ್ಟ. ಕಷ್ಟಪಟ್ಟರೂ ಅವರು ನಮ್ಮ ವಶರಾಗುವುದಿಲ್ಲ. ನಮ್ಮ ಈ ದುರಾಶೆಯ ಪ್ರಯತ್ನವನ್ನು ಇಷ್ಟಕ್ಕೆ ಎಲ್ಲರೂ ಮರೆಯುವುದು ಒಳ್ಳೆಯದು."

ಸುಂದರ ತನ್ನ ಹೇಳಿಕೆ ಮುಗಿಸಿದ.

"ಹತ್ತು ಲಕ್ಷ ರೂಗಳಿಂದ ಬೇಕಾದಷ್ಟು ವಿಲಾಸಜೀವನ ನಡೆಸಬಹುದು ಆದರೆ ಪ್ರಾಣಗಳೊಂದಿಗೆ ಸರಸವಾಡುವುದು ನನಗೆ ಸ್ವಲ್ಪವೂ ಇಷ್ಟವಿಲ್ಲ. ಬೇಕಿದ್ದರೆ ಎಲ್ಲಿಯಾದರೂ ಉಪ್ಪೋ ಸೊಪ್ಪೋ ತಿಂದು ಕಾಲ ಕಳೆಯಬಹುದು."

ಮೆಲ್ಲನೆ ಹೇಳಿದ ಫರೀದ್.

"ಲಕ್ಷಾಂತರ ರೂಪಾಯಿ ಹಣ ಬೇಕೆಂದರೆ ಅಪಾಯ ಎದುರಿಸಲೇಬೇಕು. ಒಂದು ದೊಡ್ಡ ನಿಧಿಗಾಗಿ ಪ್ರಯತ್ನಿಸುವಾಗ ಎಷ್ಟೋ ಸಾಹಸ ಮಾಡಲೇಬೇಕು. ಸುಂದರ ಹೇಳಿದ ವಿಷಯಗಳೆಲ್ಲಾ ಸತ್ಯಾಂಶಗಳೇ ಆದರೂ ನಾವು ಟ್ರಕ್ಕನ್ನು ಕೊಳ್ಳೆ ಹೊಡೆಯಲೇಬೇಕು. ಯಾವುದಾದರೂ ಒಂದು ವಿಧವಾಗಿ ಆ ಹಣ ವನ್ನು ನಮ್ಮದಾಗಿ ಮಾಡಿಕೊಳ್ಳುವುದೇ ನಮ್ಮ ಮುಖ್ಯ ಉದ್ದೇಶ. ಮತ್ತೊಮ್ಮೆ ವಿಷಯಗಳನ್ನು ಸಿಂಹಾವಲೋಕನ ಮಾಡೋಣ."

"ಆ ಟ್ರಕ್ಕನ್ನು ಹೊರ ಬಿಟ್ಟಿರುವುದು ಸುಮಾರು ಎರಡು ವರ್ಷದ ಹಿಂದೆ ಅದನ್ನು ದರೋಡೆ ಮಾಡಲು ಯಾರೂ ಪ್ರಯತ್ನಿಸುವ ಸಾಹಸ ಮಾಡಿಲ್ಲ. ಅದು ಸಾಧ್ಯವಲ್ಲದ ಕಾರ್ಯವೆಂದು ಎಲ್ಲರಿಗೂ ತಿಳಿದಿದೆ. ಅದರಿಂದಲೇ ಅದನ್ನು ಕುರಿತು ಯಾರೂ ಆಲೋಚಿಸುತ್ತಲೂ ಇಲ್ಲ. ನಿಜ ಹೇಳಬೇಕೆಂದರೆ ಆ ಟ್ರಕ್ಕಿನ ಕಡೆಗೆ ಯಾರಿಗೂ ಗಮನವಿಲ್ಲ. ಅಂದರೆ ನಾವು ಮಾತ್ರ ಅದರೆಡೆಗೆ ಗಮನ ಹರಿಸಿದ್ದೇವೆ."

"ಡ್ರೈವರ ಕೃಷ್ಣ ಸಿಂಗ್‌ನಿಗೂ ಗಾರ್ಡ ಸೈಯದ್‌ನಿಗೂ ಯಾರೂ ತಮ್ಮ ನ್ನು ತಡೆದು ವಂಚಿಸಲಾರರೆಂದು ನಂಬಿಕೆ. ಹೇಗಾದರೂ ದರೋಡೆ ಮಾಡಬಲ್ಲ ವೆಂದು ನನ್ನ ಅಚಲ ನಂಬಿಕೆ. ನಮ್ಮಲ್ಲಿ ಐಕ್ಯತೆಯಿರಬೇಕು. ನಾವೆಲ್ಲರೂ ಜೊತೆಗೂಡಿ ಧೈರ್ಯದಿಂದ ಮುನ್ನುಗ್ಗಿದರೆ ಅದನ್ನು ಸಾಧಿಸಬಲ್ಲೆವು. ಆ ಟ್ರಕ್ಕಿ ನಲ್ಲಿರುವುದು ಐವತ್ತು ಲಕ್ಷ ರೂಪಾಯಿಗಳೆಂಬ ವಿಷಯ ನೀವು ಸ್ಮರಿಸಿಕೊಂಡರೆ ಸಾಕು. ನನ್ನೊಂದಿಗೆ ಐಕ್ಯತೆಯಿಂದ ಸಹಕರಿಸಬಲ್ಲಿರೆಂದು ನನ್ನ ವಿಶ್ವಾಸ."

—ಎಂದು ಹೇಳಿದ ಮೈಕಲ್.

"ಅಂದರೆ....ನಿನ್ನ ಜಾಣ್ಮೆ ಉಪಯೋಗಿಸಿ ಯಾವುದೋ ದೊಡ್ಡ ಪ್ಲಾನ್ ಹಾಕಿರಿಸಿಕೊಂಡಿರುವೆಯೇನು ?"

—ಎಂದು ಕೇಳಿದ ಜಾನ್.

"ಹೌದು ! ಅದರ ನಂಬಿಕೆಯ ಮೇಲೆಯೇ ಹೇಳಿದ್ದೇನೆ. ಆ ಟ್ರಕ್ಕನು ಬ್ರಹ್ಮನೂ ಸಹ ಅಪಹರಿಸಲಾರನೆಂದು ಅವರ ಧೃಡ ವಿಶ್ವಾಸ. ಅಲ್ಲದ್ದೆ ದರೋಡೆ ಯಾರಾದರೂ ಮಾಡಿಯಾರೆಂಬ ಊಹೆಯೂ ಸಹ ಇಲ್ಲ. ಅದರಿಂದ ನಾವು ಧೈರ್ಯದಿಂದ ಮುನ್ನುಗ್ಗಬಹುದು...."

ಮೈಕಲನ ಮಾತು ಕೇಳಿ ಆತಂಕ ವ್ಯಕ್ತಪಡಿಸಿದ ಸುಂದರ.

"ನಿನ್ನ ಊಹೆಯ ಪ್ರಕಾರವೇ ಆಲೋಚಿಸೋಣ. ಅವರು ಎಷ್ಟೇ ಜಾಗರೂಕತೆಯಿಂದಿದ್ದರೂ, ಕೇವಲ ಎಂದು ಬಟನ್ನು ಅಮುಕಲು ಎಷ್ಟು ಕಾಲ ಬೇಕಾಗುತ್ತದೆ? ಒಂದೇ ಒಂದು ಸೆಕೆಂಡು. ಮೂರು ಸೆಕೆಂಡುಗಳಲ್ಲಿ ಮೂರು ಬಟನ್ನ್‌ಗಳನ್ನು ಅಮುಕುತ್ತಾರೆ. ಆಗ ಖಂಡಿತವಾಗಿಯೂ ಪೋಲೀಸರಿಗೆ ವಿಷಯ ಕೂಡಲೇ ತಿಳಿದುಹೋಗುತ್ತದೆ. ಆಗ ಇನ್ನು ನಾವು ಅಲ್ಲಿ ಮಾಡಬೇಕಾದ ಕೆಲಸ ಏನಿರುತ್ತದೆ? ನೀನೇ ಆಗಲಿ, ಯಾರೇ ಆಗಲಿ ಮೂರು ಸೆಕೆಂಡುಗಳಲ್ಲಿ ಆ ಟ್ರಕ್ಕನ್ನು ನಿಲ್ಲಿಸುವುದು ಬಾಗಿಲು ತೆರೆಯುವುದು ಡ್ರೈವರು–ಗಾರ್ಡನ್ನು ವಶಪಡಿಸಿಕೊಳ್ಳುವುದು ಸಾಧ್ಯವೇ? ಹಗಲುಕನಸುಗಳು ಕಾಣುವುದು ನಮ್ಮ ಪ್ರಾಣಕ್ಕೇ ಆಪತ್ತು."

ಸುಂದರ ಸರಿಯಾದ ಪ್ರಶ್ನೆ ಹಾಕಿದ.

"ಸುಂದರ! ನೀನು ಆತುರಪಟ್ಟು ಮಾತನಾಡಬೇಡ. ಮೊದಲು ಮೈಕಲ್ ಹಾಕಿಕೊಂಡಿರುವ ಪ್ಲಾನು ಏನೆಂದು ತಿಳಿದುಕೊಳ್ಳೋಣ. ನಮಗೆ ಇಷ್ಟವಿಲ್ಲದಿದ್ದರೆ ದೂರ ತಳ್ಳೋಣ. ಕೊನೆಗೆ ಓಟಿಂಗ್ ಪದ್ಧತಿ ಇದ್ದೇ ಇದೆಯಲ್ಲಾ?"

ಸಮಾಧಾನ ಹೇಳಿದ ಜಾನ್.

ಮೈಕಲ್ ನಗುತ್ತಾ ಮತ್ತೆ ಹೇಳತೊಡಗಿದ.

"ನಾನು 30 ನೇ ತಾರೀಖಿನಂದು ಬ್ಯಾಂಕ್ ಆಫ ಮೈಸೂರಿನಿಂದ ಆ ಟ್ರಕ್ಕು ಹೊರಟದ್ದು ನೋಡಿದೆ. ಅದನ್ನು ಹಿಂಬಾಲಿಸಬೇಕೆನ್ನಿಸಿತು. ಆಗಲೆ ನನ್ನ ಮನಸ್ಸಿನಲ್ಲಿ ಆ ದರೋಡೆಯನ್ನು ಕುರಿತು ಆಲೋಚನೆ ಸುಳಿದಾಡಿತು ಅದಕ್ಕೆ ಬೇಕಾದ ಪೂರ್ಣ ವಿವರ ಶೇಖರಿಸಿದೆ. ಟ್ರಕ್ ಮಾಡುವ ಪ್ರಯಾಣ ನೂರು ಮೈಲಿಗಳು. ಇದರಲ್ಲಿ ಅರವತ್ತು ಮೈಲಿಗಳು ಟ್ರಂಕ ರೋಡು, ಮಿಕ್ಕ ರೋಡು ಇಪ್ಪತ್ತು ಮೈಲಿಗಳು ತಾರು ರೋಡು, ಹದಿನೈದು ಮೈಲಿಗಳು ಖಾಸಗಿ ರೋಡು ಮಿಕ್ಕ ರೋಡು ಹಳ್ಳ ದಿಣ್ಣೆಗಳಿಂದ ಕೂಡಿಕೊಂಡು ಅಕ್ಕ–ಪಕ್ಕಗಳಲ್ಲಿ ಚಟ್ಟಗಳು ಹಬ್ಬಿಕೊಂಡಿವೆ. ನಾವು ಟ್ರಕ್ಕನ್ನು ಎಲ್ಲಿ ಕ್ರಾಸ್‌ಮಾಡಿದರೆ ಉತ್ತಮವೆಂದು ಪರೀಕ್ಷಿಸಿದೆ. ಟ್ರಂಕ್ ರೋಡಿನಲ್ಲಿ ಹೆವಿ ಟ್ರಾಫಿಕ್ ಆ ತಾರು ರೋಡು ಸಹ ಸುಮಾರಾಗಿ ಅಷ್ಟೆಯೇ ಇರುತ್ತದೆ. ಇನ್ನು ಮಿಕ್ಕ ಎರಡು ರೋಡುಗಳನ್ನು ಚೆನ್ನಾಗಿ ಪರೀಕ್ಷಿಸಿದೆ. ಖಾಸಗಿ ರೋಡಿನಲ್ಲಿ ನಾವು ಆಪರೇಟ್ ಮಾಡಬಲ್ಲೆವು. ಆ ರೋಡಿನಲ್ಲಿ ನಮಗೆ ಬೇಕಾದ ಸ್ಥಳವೊಂದಿದೆ. ಆ ಸ್ಥಳದಲ್ಲಿ

ನಮ್ಮ ದರೋಡೆ ನಿರಾಂತಕವಾಗಿ ಸಾಗಬಹುದು. ಅದೇ ಬ್ಯಾಂಡ್ ಬಾರ ಕಾರ್ನರ...."

ಸಿಗರೇಟು ಬೆಳಗಿಸಿದ ಮೈಕಲ್.

ಮೈಕಲನ ಮಾತುಗಳನ್ನು ಎಲ್ಲರೂ ಆಸಕ್ತಿಯಿಂದ ಆಲಿಸುತ್ತಿದ್ದರು.

"ಪ್ರಾಜೆಕ್ಟ್ ಬ್ರಾಂಚ್ ಆಫೀಸಿಗೆ ಐದು ಮೈಲಿಗಳ ದೂರ ಇರುವಂತೆಯೇ ಆ ಹಳ್ಳ ದಿಣ್ಣೆಗಳ ರೋಡು ಪ್ರಾರಂಭವಾಗುತ್ತದೆ. ಅದರ ಮಧ್ಯೆಯೇ ಇದೆ. ನಾನು ಹೇಳಿದ ಬ್ಯಾಂಡ್ ಬಾರ್ ಕಾರ್ನರ್ ಸಾಧಾರಣವಾಗಿ ಈ ರಸ್ತೆಯಲ್ಲಿ ಯಾರೂ ಪ್ರಯಾಣ ಮಾಡುವುದಿಲ್ಲ. ಕೇವಲ ಪ್ರಾಜೆಕ್ಟ್ ಏರಿಯಾಗಳಿಗೆ ಹೋಗುವವರು ಮಾತ್ರ ಈ ರೋಡನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಎರಡು ಬೆಟ್ಟಗಳ ಮಧ್ಯೆ ಈ ತಿರುವು ಡೆಂಜರಸ್ ಕಾರ್ನರ್. ಬೆಟ್ಟದ ಗುಂಡುಗಳಿಗೆ ಆ ಕಡೆ ಈ ಕಡೆ ಮುಳ್ಳಿನ ಪೊದೆಗಳು ಗುಬ್ಬುರಾಗಿ ಹಬ್ಬಿಕೊಂಡಿವೆ ಅಂತಹ ಅನುಕೂಲವಾದ ಸ್ಪಾಟ್‌ನ ವರೆಗೆ ಬೇರೆಲ್ಲೂ ಸಿಗಲಾರದು...."

"ಹೌದು ! ನನಗೂ ಜ್ಞಾಪಕವಿದೆ. ನಾನೂ ಎರಡು ಮೂರುಬಾರಿ ಆ ಕಾರ್ನರ್‌ನಲ್ಲಿ ಪ್ರಯಾಣ ಮಾಡಿದ್ದೇನೆ. ಆ ಕಾರ್ನರ್‌ನ್ನು ಸಮೀಪಿಸುವ ಮೊದಲು, ಸ್ವಲ್ಪ ದೂರದಲ್ಲಿಯೇ ಒಂದು ಟ್ರಾಫಿಕ್ ಬೋರ್ಡು ಸಹ ಇದೆ. ಅದರಮೇಲೆ ಅಲ್ಲಿ ಎಷ್ಟು ಯಾಕ್ಸಿಡೆಂಟ್‌ಗಳು ನಡೆದಿವೆಯೆಂಬ ಸಂಖ್ಯಾವಿವರಗಳ- ಆ ಬೋರ್ಡಿನಮೇಲೆ ಬರೆಯಲ್ಪಟ್ಟಿದೆ. ನೀನು ಹೇಳುವುದು ಕರೆಕ್ಟ್!....ಇಟೀಜ್ ಎ ಗುಡ್ ಪ್ಲೇಸ್...."

—ಎಂದು ಹೇಳಿದ ಜಾನ್.

"ಎಗ್ಜಾಕ್ಟ್ಲೆ....ನಾನು ಹೇಳುವುದನ್ನು ಸಂಪೂರ್ಣವಾಗಿ ಕೇಳಿ. ಆ ಟಕ್ಕಿನ ಕ್ಯಾಬಿನ್‌ನಲ್ಲಿರುವುದು ಇಬ್ಬರು ಮಾತ್ರ. ಒಬ್ಬ ಡ್ರೈವರ್ ಕೃಷ್ಣಸಿಂಗ್ ಇನ್ನೊಬ್ಬ ಗಾರ್ಡ್ ಸೈಯದ್. ಅವರು ಆ ಕಾರ್ನರ್‌ಗೆ ಬರುವ ವೇಳೆಗೆ ಬಹಳ ಬಳಲಿರುತ್ತಾರೆ. ಇದು ಬೇಸಿಗೆಯ ಕಾಲ. ಸುಮಾರು ನೂರು ಮೈಲಿಗಳ ಪ್ರಯಾಣ ಮಾಡಿರುತ್ತಾರೆ. ಅವರು ಪಕ್ಕದಲ್ಲಿನ ಗಾಜಿನ ಸೈಡ್ಸ್ ಗಾಳಿಗಾಗಿ ಮುಚ್ಚಿರುವುದಿಲ್ಲ ತೆರೆದೇ ಇರುತ್ತಾರೆ. ಇದೊಂದು ಪಾಯಿಂಟ್. ಅವರು ಕಾರ್ನರನ್ನು ಸೇರಿಕೊಳ್ಳುವ ತಿರುವು ತಿರುಗುತ್ತಲೇ ಒಂದು ದಾರುಣ ದೃಶ್ಯ ಅವರ ಕಣ್ಣಿಗೆ ಬಿತ್ತೆಂದುಕೊಳ್ಳಿ...."

"ಒಂದು ಕಾರು ನಿಂತಿರುತ್ತದೆ ಆ ಕಾರು ಬೆಟ್ಟದ ಬಂಡೆಗೆ ಗುದ್ದಿಕೊಂಡು, ಪೆಟ್ರೋಲ್ ಟ್ಯಾಂಕ್‌ಗೆ ಬೆಂಕಿ ತಗುಲಿ ಹತ್ತಿಕೊಂಡು ಉರಿಯುತ್ತಿರುತ್ತದೆ. ರೋಡಿನ ಮಧ್ಯೆ ಅತ್ಯಂತ ಶೋಚನೀಯ ಸ್ಥಿತಿಯಲ್ಲಿ, ರಕ್ತದ ಮಡುವಿನಲ್ಲಿ, ಶರೀರವೆಲ್ಲಾ ಗಾಯಗಳಿಂದ ಶವದಂತೆ ಓರ್ವ ತರುಣಿಯೊಬ್ಬಳು ಬಿದ್ದಿರುತ್ತಾಳೆ ಮಿಸ್ಟರ್ ಜಾನ್! ನೀನು ಹೇಳು!? ಆ ಟ್ರಕ್ಕಿನ ಕ್ಯಾಬಿನ್‌ನಲ್ಲಿ ಕುಳಿತಿರುವ ಇಬ್ಬರು ವ್ಯಕ್ತಿಗಳು ಏನು ಮಾಡುತ್ತಾರೆ? ಡ್ರೈವ್ ಮಾಡುತ್ತಾ ಟ್ರಕ್ಕನ್ನು ಅವಳ ಮೇಲೆಯೇ ಬಿಟ್ಟುಕೊಂಡು ಹೋಗುತ್ತಾರೋ? ಅವಳು ಕೊನೆಯುಸಿರಿನಲ್ಲಿರುವಳೋ—ಇಲ್ಲವೇ ಸತ್ತು ಹೋಗಿರುವಳೋ—ಎಂಬ ವಿಷಯ ತಿಳಿದಕೊಳ್ಳುವರೋ ?"

ಜಾನ್ ಉತ್ತರ ಹೇಳಲಿಲ್ಲ. ಏನು ಹೇಳಬೇಕೆಂದು ಆಲೋಚಿಸುತ್ತಾ, ಸುಂದರನ ಕಡೆಗೆ ನೋಡಿದ.

ಸುಂದರನಿಗೆ ಈಗಲೀಗ ಯೋಜನೆಯಲ್ಲಿ ಜಯಗಳಿಸಬಹುದೆಂಬ ಆಶೆಯು ಮೂಡತೊಡಗಿತು.

ಮೈಕಲ್ ನಗೆ ಬೀರಿದ.

"ಏನು ಸುಂದರ ! ಈಗ ನೀನು ಏನು ಹೇಳುವೆ ? ಇದೆಲ್ಲಾ ಹಗಲುಗನಸೆಂದೇ ಹೇಳುವೆಯೋ? ಇದರಲ್ಲೇನಾದರೂ ಉಪಯೋಗವಿದೆಯೆಂದು ಹೇಳುವೆಯೋ ?"

—ಎಂದು ಕೇಳಿದ.

"ಸುಂದರ ಉತ್ತರ ಹೇಳುವಂತೆ ಜಾಗ್ರತ ವ್ಯಕ್ತಿಗಳಾಗಿದ್ದರೆ ಒಬ್ಬನು ಟ್ರಕ್ ಇಳಿದು ಆ ತರುಣಿಯ ವಿಷಯ ನೋಡುತ್ತಾನೆ. ಮತ್ತೊಬ್ಬ ವೈರಲೆಸ್ ಸೆಟ್ಟನಿಂದ ಏಜನ್ಸಿಗೆ ಕಂಟ್ಯಾಕ್ಟ್ ಮಾಡುತ್ತಾನೆ.

"ನೀನು ಏನು ಹೇಳುವೆ ಸುಂದರ ?"

ಮೈಕಲ್ ಮತ್ತೆ ಕೇಳಿದ.

"ಜಾನ್ ಹೇಳಿದ್ದು ಕರೆಕ್ಟ್ ಡ್ರೈವರ್ ಕೃಷ್ಣಸಿಂಗ್ ಸ್ಟೀರಿಂಗ್ ಬಳಿಯೇ ಕುಳಿತಿರುತ್ತಾನೆ. ಗಾರ್ಡ ಸೈಯದ್ ಟ್ರಕ್ಕನಿಂದ ಕೆಳಗಿಳಿದು ಅವಳನ್ನು ಸಮೀಪಿಸಿ ಕೊನೆಯುಸಿರು ಎಳೆಯುತ್ತಿದ್ದರೆ ರೋಡಿನ ಮಧ್ಯದಿಂದ ಪಕ್ಕಕ್ಕೆ ತೊಲಗಿಸಿ ಮತ್ತೆ ಬಂದು ಟ್ರಕ್‌ನಲ್ಲಿ ಕುಳಿತುಕೊಳ್ಳುತ್ತಾನೆ. ಅಷ್ಟರಲ್ಲಿ ಒಳಗಡೆ ಡ್ರೈವರ

ಕೃಷ್ಣಸಿಂಗ್ ಅಂಬುಲೆನ್ಸ್‌ಗಾಗಿ ಪೋಲೀಸ ಹೆಡ್‌ಕ್ವಾಟರ್ಸ್‌ಗೆ ವಿಷಯ ತಿಳಿಯ ಪಡಿಸುತ್ತಾನೆ. ಅವಳನ್ನು ಬಿಟ್ಟು ಅವರು ಮುಂದೆ ಸಾಗುತ್ತಾರೆ."

ಸುಂದರ ಮೆಲ್ಲನೆ ಹೇಳಿದ.

"ನಾನೂ ಸಹ ಹಾಗೆಯೇ ಊಹಿಸಿಕೊಂಡಿದ್ದೇನೆ. ನಿಜವಾಗಿಯೂ ಆ ರೀತಿ ನಡೆಯಿತೆಂದರೆ ನಮಗೊಂದು ಅವಕಾಶ ಲಭಿಸಿದಂತಾಗಲಿಲ್ಲವೆ? ಈಗ ಮತ್ತೊಂದು ಪ್ರಶ್ನೆ. ಗಾರ್ಡ ಟ್ರಕ್ ಹೊರಗಡೆ ಒಳಗಡೆ ಡ್ರೈವರ ಟ್ರಕ್ಕಿನಲ್ಲ ಈ ರೀತಿಯಿರುವಾಗ ಡ್ರೈವರ ಬಟನ್ ಅಮುಕಿ ಟೈಮಲಾಕ ಕ್ಯಾನ್ಸಲ್ ಮಾಡುವುದಾಗಲಿ, ಸ್ವಿಚ್ ಹಾಕಿ ಸ್ಟಿಡ್ಸ್ ಮುಚ್ಚುವುದಾಗಲಿ ನಡೆಯಲು ಸಾಧ್ಯವೇ?"

ಮೈಕಲ್ ಕೇಳಿದ.

"ಇಲ್ಲ."

ಸುಂದರ ಧೃಡವಾಗಿ ಹೇಳಿದ.

"ನೀನು ಏನು ಹೇಳುವೆ ಜಾನ್ ?"

ಜಾನ್‌ನನ್ನು ಕೇಳಿದ ಮೈಕಲ್.

"ಸುಂದರ ಹೇಳಿದ ಪ್ರಕಾರ ಆಲೋಚಿಸಿದರೆ ಒಂದು ಸಾರಿ ಟೈಮಲಾಕ ಕ್ಯಾನ್ಸಲ್ ಮಾಡಿದರೆ ಅದನ್ನು ತೆರೆಯಲು ರಷ್ಯಾದಿಂದ ಎಕ್ಸಪರ್ಟ ಬರ ಬೇಕು. ಆದುದರಿಂದ ಆತುರಪಟ್ಟು ಡ್ರೈವರ ಬಟನ್ ಅಮುಕಲಾರ. ಹಾಗೆಯೇ ಸ್ವಿಚ್ಚನ್ನೂ ಸಹ ಅಮುಕಲು ಪ್ರಯತ್ನಿಸಲಾರ. ಏಕೆಂದರೆ ಗಾರ್ಡ ಹೊರಗಡೆಯಿದ್ದಾನೆ. ಆ ಸುಂದರ ತರುಣಿ ಅತ್ಯಂತ ಶೋಚನಿಯ ಸ್ಥಿತಿಯಲ್ಲಿ ಬಿದ್ದಿದ್ದಾಳೆ. ಓರ್ವ ಅಬಲೆ ರಕ್ತಸಿಕ್ತವಾಗಿ ಬಿದ್ದರುವಾಗ ಪುರುಷನ ಕರ ಸಾಧಾರಣವಾಗಿ ಕೆಲಸ ಮಾಡುವುದಿಲ್ಲ. ಜೊತೆಗೆ ಅಪಾಯವನ್ನು ಕುರಿತು ಕಿಂಚಿತ್ ಸಹ ಆಲೋಚನೆ ಬರುವುದಿಲ್ಲ. ಆದುದರಿಂದ ಅವನು ಸ್ಟೈಡ್ಸ್ ಮುಚ್ಚಲು ಯತ್ನಿಸುವುದಿಲ್ಲ. ಅವನ ಮನಸ್ಸು ರೋಡಿನ ಮಧ್ಯೆ ಬಿದ್ದಿರುವ ತರುಣಿಯನ್ನು ಕುರಿತು ಊಹಿಸುತ್ತಿರುತ್ತದೆ."

ಜಾನ್ ಊಹಿಸಿ ಹೇಳಿದ.

"ಅಂದರೆ ನಾವು ಟ್ರಕ್ಕನ್ನು ನಿಲ್ಲಿಸುತ್ತೇವೆ ಅಲ್ಲವೇ ?"

"ಹೌದು."

"ಡ್ರೈವರ ಬಟನ್ ಮುಟ್ಟುವ ಹಂಟಿಗೆ ಹೋಗದಂತೆ ಮಾಡುತ್ತೇವೆ ಅಲ್ಲವೇ ?"

"ಹೌದು."

"ಮೈ ಡಿಯರ್ ಬಾಯ್ ಸುಂದರ....ಈಗ ನೀನು ಏನು ಹೇಳುವೆ ? ನೀನು ಅಸಂಭವವೆಂದು ಹೇಳಿದ್ದು ಸಂಭವವಾಗುತ್ತದಲ್ಲವೇ ? ಹಗಲುಗನಸುಗಳನ್ನೂ ಸಹ ನಿಜವಾಗಿ ಮಾಡಬಹುದು ಎಲ್ಲಕ್ಕೂ ಬೇಕಾದದ್ದು ವಿವೇಕಯುತವಾದ ಆಲೋಚನೆ ಸರಿಯೇ ?"

ಮೈಕಲ್ ಹೆಮ್ಮೆಯಿಂದ ಹೇಳಿದ.

"ಅಷ್ಟು ಮಾತ್ರಕ್ಕೆ ಸಂತೋಷಪಟ್ಟರೆ ಏನು ಲಾಭ ? ಆ ಮೇಲೆ ಮುಂದಿನ ವಿಷಯ ಹೇಳು."

ಸುಂದರ ಕೋಪೋದ್ರೇಕದಿಂದ ಕೇಳಿದ.

"ಹೇಳುತ್ತೇನೆ ಸುಂದರ. ವೃಥಾ ಸಿಟ್ಟಿಗೇಳಬೇಡ. ಟ್ರಕ್ಕ ನಿಲ್ಲುತ್ತಲೇ ಡ್ರೈವರನು ಒಳಗಡೆ ಕುಳಿತಿರುತ್ತಾನೆ. ಗಾರ್ಡ ಇಳಿದು ಆ ಗಾಯಗೊಂಡ ತರುಣಿಯ ಕಡೆಗೆ ಹೋಗುತ್ತಾನೆ ಬಿಸಿಲಿನ ಬೇಗೆಗೆ ಸೈಡ್ಸ್ ಮುಚ್ಚಿರುವುದಿಲ್ಲ. ನಾನು ಟ್ರಕ್ ಹಿಂಭಾಗದಿಂದ ಸರಸರನೆ ಬಳಿಗೆ ಬರುತ್ತೇನೆ. ಕ್ಯಾಬಿನ್ ಕಿಟಕಿಯಿಂದ ಅವನಿಗೆ ಪಿಸ್ತೂಲು ಗುರಿಯಿಡುತ್ತೇನೆ. ಸರಿಯಾಗಿ ಅದೇ ಸಮಯದಲ್ಲಿ ಆ ತರುಣಿ ಆ ಗಾರ್ಡನಿಗೆ ಪಿಸ್ತೂಲು ಗುರಿಯಿಟ್ಟು ಹ್ಯಾಂಡ್ಸ್‌ಪ್ ಎನ್ನುತ್ತಾಳೆ. ಈಗ ಹೇಳು ಆಗ ಇಬ್ಬರು ಹೀರೋಗಳು ಏನು ಮಾಡಬಲ್ಲರು ?"

"ಹೀರೋಗಳಂತೆಯೇ ವರ್ತಿಸಲಿರುತ್ತಾರೆ. ಧೈರ್ಯದಿಂದ ನಿಮ್ಮನ್ನು ಎದುರಿಸುತ್ತಾರೆ."

ಮೈಕಲನ ಪ್ರಶ್ನೆಗೆ ಕೂಡಲೆ ಉತ್ತರಿಸಿದ ಸುಂದರ.

"ಅವರು ಹೀರೋಗಳೇ ಆಗಿರಬಹುದು. ಆದರೆ ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಅವಿವೇಕದಿಂದ ವರ್ತಿಸಲಾರರು. ನಮ್ಮ ಮಾತುಗಳಿಗೆ ಸುಲಭವಾಗಿ ವಶರಾಗುತ್ತಾರೆ. ಪ್ರಾಣ ಕಾಪಾಡಿಕೊಳ್ಳುತ್ತಾರೆ."

"ಸಪೋಜ್....ಅವರು ವಶವಾಗಲಿಲ್ಲವೆಂದುಕೊ? ಆಗ ಅವರನ್ನು ಏನು ಮಾಡುವೆ ?"

"ಕೈಯಲ್ಲಿರುವ ಪಿಸ್ತೂಲುಗಳಿಂದ ಗುಂಡಿನ ರುಚಿ ತೋರಿಸುತ್ತೇವೆ ಎರಡು ಶವಗಳಿಲ್ಲದೆ ಐವತ್ತು ಲಕ್ಷ ನಮ್ಮ ನಮ್ಮಾಗಲಾರದು. ರಕ್ತಪಾತವಿಲ್ಲದೇ ಲಕ್ಷ್ಮೀದೇವಿಗೆ ಸ್ವಾಗತ ಬಯಸಲಾಗುವುದಿಲ್ಲ."

ಮೈಕಲ್ ಅರ್ಧ ಕುಡಿದು ಮೇಜಿನ ಮೇಲಿಟ್ಟಿದ್ದ ವಿಸ್ಕಿ ಬಾಟಲಿ ಕೈಗೆ ತೆಗೆದುಕೊಂಡು ಪೂರ್ತಿ ಖಾಲಿ ಮಾಡಿದ.

ಅದುವರೆವಿಗೂ ಪ್ರೇಕ್ಷಕನಂತೆ ನೋಡುತ್ತಾ ಕುಳಿತಿದ್ದ ಫರೀದ್ ಬಾಯಿ ಬಿಚ್ಚಿದ.

"ರಕ್ತಪಾತ ಮಾಡುವಿರಾ ? ರಕ್ತ ನೋಡಿದ ಕೂಡಲೇ ನನ್ನ ಕಣ್ಣುಗಳ ತಿರುಗುತ್ತವೆ. ವಾಂತಿ ಪ್ರಾರಂಭವಾಗುತ್ತದೆ. ಆ ಸಮಯದಲ್ಲಿ ನನ್ನ ಹೃದಯ ನಿಂತುಹೋದರೂ ಆಶ್ಚರ್ಯ ಪಡಬೇಕಾಗಿಲ್ಲ."

—ಎಂದು ಹೇಳಿದ ಫರೀದ.

"ಫರೀದ ಜೀ ! ನೀವು ಬೇರೆ ಕೆಲಸ ನೋಡುವಂತೆ ಕಲ್ಪಿಸಿಕೊಡುತ್ತೇವೆ ಆ ಸ್ಪಾಟಿನಲ್ಲಿ ನೀವು ಇರಬೇಕಾದ ಅವಶ್ಯಕತೆಯೇ ಇರುವುದಿಲ್ಲ. ನಿಮ್ಮ ಕಣ್ಣುಗಳಿಗೆ ರಕ್ತ ಕಾಣದಂತೆ ನೋಡಿಕೊಳ್ಳುವ ಹೊಣೆ ನನಗೆ ಸೇರಿದ್ದು."

—ಎಂದು ಫರೀದನಿಗೆ ಅಭಯ ನೀಡಿದ ಮೈಕಲ್.

"ಏನೇ ಆದರೂ ಇದುವರೆವಿಗೂ ಇದೊಂದು ಕೇವಲ ಕಳ್ಳರ ಕೂಟ ಎಂದುಕೊಂಡಿದ್ದೆವು. ಈಗ ನೀನು ಹೇಳುತ್ತಿರುವುದು ನೋಡಿದರೆ ಕೊಲೆ ಪಾತಕರ ಕೂಟವಾಗುವಂತಿದೆ. ಯಾವ ವಿಷಯವನ್ನೇ ಆಗಲಿ ಚೆನ್ನಾಗಿ ಆಲೋಚಿಸಿ ಮುನ್ನಡೆಯುವುದು ಶ್ರೇಯಸ್ಕರ ಮೈಕಲ್ ಇದು ಕೇವಲ ನೂರು ಸಾವಿರಗಳ ವ್ಯವಹಾರವಿಲ್ಲ. ಲಕ್ಷಾಂತರ ರೂಪಾಯಿ ವ್ಯವಹಾರ."

"ಜಾನ್ ! ಸುಂದರ ಫರೀದರಿಬ್ಬರೂ ಈ ದರೋಡೆಗೆ ವಿಮುಖರಾಗಿರುವರೆಂದು ಅವರ ಮಾತುಗಳಿಂದ ನಮಗೆ ತಿಳಿದಂತಾಯಿತು. ಈ ವಿಷಯದಲ್ಲಿ ನೀನು ಏನು ಹೇಳುವೆ ?"

ಜಾನ್‌ನ ಮುಖ ನೋಡುತ್ತ ಕೇಳಿದ ಮೈಕಲ್.

"ಇದರಲ್ಲಿ ನಾನು ಹೇಳುವುದೇನು ಬಂತು. ನಮಗೆ ಓಟಿಂಗ್ ಪದ್ಧತಿ

ಇದ್ದೇ ಇದೆಯಲ್ಲಾ ? ಓಟು ಮಾಡೋಣ. ಮೆಜಾರಿಟಿಯ ಆಧಾರದಿಂದ ನಿರ್ಣಯಿಸೋಣ."

ತನ್ನ ಆಲೋಚನೆ ತಿಳಿಸಿದ ಜಾನ್.

"ಆಲ್ ರೈಟ್, ಫ್ರೆಂಡ್ಸ್ ಜಾನ್‌ನ ಅಭಿಪ್ರಾಯದಂತೆ ನಾನೆಲ್ಲರೂ ಓಟು ಮಾಡೋಣ."

—ಎಂದು ಮುಕ್ತಾಯ ಹಾಡಿದ ಮೈಕಲ್.

ಓಟಿಂಗ್ ಪದ್ಧತಿಯ ನಿರ್ಣಯಕ್ಕೆ ಆತಂಕಪಡಿಸಿದ ಸುಂದರ.

"ನಾನು ಫರೀದರಬ್ಬರೂ ವಿಮುಖರು. ನೀನು ಜಾನ ಇಬ್ಬರೂ ಸುಮುಖರು. ಆದುದರಿಂದ ಓಟಿಂಗ್ ಇಟ್ಟರೂ ಸಹ ಮೆಜಾರಿಟಿ ಲಭಿಸುವುದಿಲ್ಲ ಓಟಿಂಗ್ ಸುಮ್ಮನೇ ವೇಸ್ಟ್."

—ಎಂದು ಹೇಳಿದ ಸುಂದರ.

"ಇಲ್ಲ ಓಟಿಂಗ್ ನಡೆಯಲೇಬೇಕು. ಇದು ನಮ್ಮಲ್ಲಿ ಪ್ರತಿಯೊಂದು ಸಾರಿಯೂ ಕಳ್ಳತನಕ್ಕೆ ಹೋಗುವಾಗ ನಡೆಯುವ ಪದ್ಧತಿ. ಐದನೇ ವ್ಯಕ್ತಿಯಾದ ಓರ್ವ ಸ್ತ್ರೀ ನಮ್ಮ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸುತ್ತಾಳೆ. ಗಾಬರಿ ಪಡಬೇಡಿ."

—ಎಂದು ಹೇಳಿದ ಮೈಕಲ್.

"ಯಾರು ಆ ಐದನೇ ವ್ಯಕ್ತಿ ?"

ಎಲ್ಲರಲ್ಲಿಯೂ ಒಂದೇ ಸಾರಿ ಆ ಪ್ರಶ್ನೆ ಉದ್ಭವಿಸಿತು.

ಮೈಕಲ್ ತನ್ನ ಕೈ ಗಡಿಯಾರದ ಕಡೆ ಒಂದು ಸಾರಿ ನೋಡಿಕೊಂಡು

"ಮಿಸ್ ಚಂಚಲಾದೇವಿ....ಕಮಿನ್...."

—ಎಂದು ಕರೆದ.

ಮರುಕ್ಷಣದಲ್ಲಿಯೇ ಚಂಚಲಾದೇವಿ ಆ ಕೊಠಡಿಯೊಳಕ್ಕೆ ಹೆಜ್ಜೆ ಇಡಿಯಿಟ್ಟಳು.

# ಮೂರು

ಎಲ್ಲರ ನೋಟಗಳೂ ಅವಳ ಮೇಲೆ ಕೇಂದ್ರೀಕೃತವಾದವು.

ಅವಳ ಆಗಮನದಿಂದ ಆ ಕೊಠಡಿಯಲ್ಲಿನ ಬೆಳಕು ಹೊಸರಂಗಿನ ಕಾಂತಿಯಿಂದ ಪ್ರಕಾಶಿಸತೊಡಗಿದಂತೆ ಅವರಿಗೆ ಭಾಸವಾಯಿತು.

ಎಷ್ಟೋ ವರ್ಷಗಳ ಹಿಂದೆ ಆರಿಹೋಗಿದ್ದ ಫರೀದನ ತುಟಿಗಳು ಜೀವಗೊಂಡವು.

ಸುಂದರನ ಶರೀರದಲ್ಲಿನ ರಕ್ತ ಬಿಸಿಯೇರತೊಡಗಿತು.

ಜಾನ್‌ನ ಕಣ್ಣುಗಳು ಉರಿಯತೊಡಗಿದವು.

ಮೈಕಲ್ ಒಬ್ಬನೇ ಯಾವ ಆಕರ್ಷಣೆಗೂ ಗುರಿಯಾಗದೆ ನಿಶ್ಚಲತೆಯಿಂದ ಕುಳಿತಿದ್ದನು.

ಅವಳು ಓವರ್ ಕೋಟು ತೆಗೆದು ಸ್ಟ್ಯಾಂಡಿನ ವಂಕಿಗೆ ತಗುಲಿಸಿದಳು. ರಕ್ತದಂತಹ ಕೆಂಪನೆಯ ವರ್ಣದ ಕುಪ್ಪಸ ಧರಿಸಿದ್ದಳು.

ಒಳಗಡೆ ಬ್ರಾಸರಿಯ ಆಧಾರವಿಲ್ಲದ ಸ್ಥನಗಳು ಕೆಳಕ್ಕೆ ಜಾರುತ್ತೇವೆಂದು ಹೇಳುತ್ತಿದ್ದವು.

ಸಣ್ಣನೆಯ ಸೊಂಟ ಆ ಸ್ಥನಗಳ ಭಾರ ಹೊರಲಾರನೆಂದು ಹೇಳುತ್ತಿತ್ತು.

ಅವಳ ಅಗಲವಾದ ಬಾಯಿ, ಹಲಸಿನ ತೊಳೆಗಳಂತಹ ತುಟಿಗಳು ಎಂತಹ ಪುರುಷ ಪುಂಗವನನ್ನಾದರೂ ಆವೇಶ ಉದ್ರೇಕಗಳಿಗೆ ಗುರಿ ಮಾಡಿ ಚಪಲಚಿತ್ತನನ್ನಾಗಿ ಮಾಡುವಂತಿದ್ದವು.

ಆಪಾದಮಸ್ತಕ ಅವಳು ಬೇಲೂರು ಶಿಲಾಬಾಲಿಕೆಯ ಶಿಲ್ಪದಂತಿದ್ದಳು. ಕೆಂಪನೆಯ ಕುಪ್ಪಸ ಅದಕ್ಕಿಂತಲೂ ಕೆಂಪನೆಯ ಸೀರೆ ಅವಳನ್ನು ಉಗ್ರ ಕಾಳಿಯ ರೂಪ ಸ್ಮರಿಸುವಂತೆ ಮಾಡುತ್ತಿದ್ದವು.

"ಈಕೆಯ ಹೆಸರು ಮಿಸ್ ಚಂಚಲಾದೇವಿ. ನಾವು ಇದುವರೆವಿಗೂ ಎದುರು ನೋಡುತ್ತಿದ್ದ ಐದನೇ ಭಾಗಸ್ಥಳು."

ಮೈಕಲ್ ಅವಳನ್ನು ಎಲ್ಲರಿಗೂ ಪರಿಚಯ ಮಾಡಿಸಿದ.

ಅವಳು ನಕ್ಕಳು.

ಕಪೋಲಗಳಲ್ಲಿ ಗುಳಿ ಕಾಣಿಸಿಕೊಂಡಿತು.

ಸುಂದರನ ಹೃದಯದಲ್ಲಿ ವಿಚಿತ್ರ ಭಾವನೆ ಅವತರಿಸಿತು.

"ಈತನ ಹೆಸರು ಜಾನ್...ನಾನು ನಗರದಲ್ಲಿ ಇಲ್ಲದಿರುವಾಗ ನನ್ನ ಸ್ಥಾನದಲ್ಲಿ ಇದ್ದುಕೊಂಡು ಈ ಕೂಟವನ್ನು ನಡೆಸುವುದು ಈತನೇ ಈತನು ನಿಮ್ಮ ಕಣ್ಣುಗಳಿಗೆ ಕೇವಲವಾಗಿ ಕಾಣಿಸಬಹುದು. ಬಟ್ ಹಿ ಈಜ್ ಡೇರಿಂಗ್ ಡೆಕಾಯಿಟ್ !"

ಮೈಕಲ್‌ನ ಪರಿಚಯ ವಾಕ್ಯಗಳಿಗೆ ಉಬ್ಬಿಹೋದ ಜಾನ್.

"ಈತ ಫರೀದ ಯಾವುದೇ ಮಾದರಿಯಬೀಗ ಕ್ಷಣದಲ್ಲಿ ಇಬ್ಭಾಗ ಮಾಡುವುದರಲ್ಲಿ ಎಕ್ಸಪರ್ಟ್. ನಮ್ಮ ಕೂಟಕ್ಕೆ ಕಿರೀಟವಿಲ್ಲದ ಮಹಾರಾಜ. ಒಂದು ಮಾತಿನಲ್ಲಿ ಹೇಳಬೇಕೆಂದರೆ ಹಿ ಈಜ್ ಎ ಇಗ್ನಿಷನ್ ಕೀ ಫರವರ್ ಆಪ ರೇಷನ್ಸ್."

ಫರೀದ ತಲೆಬಾಗಿದ.

"ಈತನು ಸುಂದರ ! ಯಾವುದಾದರೂ ಕ್ಷತ್ರಿಯ ವಂಶದಲ್ಲಿ ಹುಟ್ಟಬೇಕಾಗಿದ್ದ ಸುಂದರ ಯುವಕ. ನಮ್ಮೆಲ್ಲರಿಗಿಂತಲೂ ಚಿಕ್ಕವನು. ವಿವೇಕಶಾಲಿ.—ಸರಿಯಾಗಿ ಡೈರೆಕ್ಟ್ ಮಾಡಿದರೆಂದರೆ ಚಂದ್ರಮಂಡಲಕ್ಕಾದರೂ ಒಬ್ಬನೇ ಹೋಗಿ ಬರಬಲ್ಲ ಚತುರ. ಬಟ್ ಒಂದೊಂದು ಸಾರಿ ಇಂಟಲಿಜೆಂಟ್ ಈಡಿಯಟ್‌ನಂತೆ ವರ್ತಿಸುತ್ತಿರುತ್ತಾನೆ. ಆದರೂ ಅವನ ವರ್ತನೆಯನ್ನು ನಾವು ಸ್ವೀಕರಿಸುತ್ತಿದ್ದೇವೆ."

ಸುಂದರನ ಮುಖ ಕೆಂಪೇರಿತು. ಅವಳ ಸೌಂದರ್ಯವನ್ನು ಆತ ಕಣ್ಣುಗಳಿಂದ ಹೀರುತ್ತಿದ್ದನು.

"ಗುಡ್ ಫ್ರೆಂಡ್ಸ! ಹಾರ್ಟಿ ಕಂಗ್ರಾಜ್ಯುಲೇಷನ್ಸ."

—ಎಂದು ಹೇಳುತ್ತಾ ಚಂಚಲಾದೇವಿ ಒಂದು ಬೆತ್ತದ ಕುರ್ಚಿ ಎಳೆದು ಕೊಂಡು ಕುಳಿತುಕೊಂಡಳು.

ಸುಂದರ ಕುಳಿತಿದ್ದವನು ಮೇಲಕ್ಕೆದ್ದು ನಿಂತ.

"ಚಂಚಲಾ ನಮ್ಮ ಪ್ಲಾನಿನ ವಿಷಯವಾಗಿ ಮುಖ್ಯವಾದ ವಿಷಯಗಳು ಇವರೆಲ್ಲರಿಗೂ ವಿವರಿಸಿ ಹೇಳಿದೆ. ಆದರೆ ಇವರಲ್ಲಿಬ್ಬರು ಇದಕ್ಕೆ ವ್ಯತಿರಿಕ್ತ ತೀರ್ಮಾನಿಸಿದ್ದಾರೆ. ಅದರ ಸಲುವಾಗಿ ಓಟಿಂಗ್ ಇಡಬೇಕೆಂದು ಹೇಳುತ್ತಿದ್ದಾರೆ."

ಮೈಕಲನ ಮಾತುಗಳು ಕೇಳಿ ಬೆಚ್ಚಿಬಿದ್ದ ಚಂಚಲಾ ಮೈಕಲ್‌ನ ಕಡೆಗೆ ತೀಕ್ಷ್ಣವಾಗಿ ನೋಡಿದಳು.

"ವ್ಯತಿರೇಕವಾಗಿರುವರೇ? ವಾಟಿಜ್ ಧಿಸ್? ಹತ್ತು ಲಕ್ಷ ಪಡೆವ ಅದೃಷ್ಟವನ್ನು ಕಾಲಲ್ಲಿ ಒದೆಯುವಂತಹ ಮೂರ್ಖರು ಈ ಕಲಿಯುಗದಲ್ಲಿ ಇರುವರೇ? ಬಹಳ ಆಶ್ಚರ್ಯವಾಗುತ್ತಿದೆ. ಎಲ್ಲರಿಗೂ ಅವಮಾನ. ನಾನು ಇಲ್ಲಿಗೆ ದಾರಿ ತಪ್ಪಿ ಬಂದಂತಿದೆ."

—ಎಂದು ಹೇಳಿದಳು ಚಂಚಲಾ.

"ಅದೃಷ್ಟ ಪಡೆಯುವ ಆಶಯ ಇಲ್ಲದಿಲ್ಲ. ಆದರೆ ಅಪಾಯಕ್ಕೆ ಸಿಲುಕಿಕೊಳ್ಳುವೆವೇನೋ ಎಂಬ ಭಯ ಅಷ್ಟೇ."

—ಎಂದು ಸರಿಪಡಿಸಿ ಹೇಳಿದ ಮೈಕಲ್.

"ಮಿಸ್ಟರ್ ಮೈಕಲ್ ನಿನ್ನ ಕೂಟ ಬಹಳ ವಿಶೇಷವಾದುದೆಂದು ಹೇಳಿದೆ. ಈಗ ನೋಡಿದರೆ...."

"ಅದರಲ್ಲಿ ಸಂದೇಹ ಪಡಬೇಕಾದ ಅವಶ್ಯಕತೆಯೇ ಇಲ್ಲ. ನಮ್ಮ ಕೂಟ ಬಹಳ ವಿಶೇಷಯುತವಾದದ್ದೇ। ಆದರೆ ಬಂದ ತೊಡಕೆಲ್ಲಾ ದರೋಡೆ ವಿಷಯದಲ್ಲಿ. ಇದುವರೆವಿಗೂ ನಮ್ಮ ಕೂಟ ಮೈನರ್ ಕೇಸುಗಳನ್ನೇ ಸ್ವೀಕರಿಸುತ್ತಿತ್ತು ದಿಸ್ಸೀಜ್ ಮೇಜರ ಥಿಂಗ್:"

"ನಿನ್ನ ಕೂಟ ಬಹಳ ವಿಶೇಷವಾದುದೆಂದು ನಾವಿಬ್ಬರೂ ರವೀಂದ್ರ ಕಲಾಕ್ಷೇತ್ರದಲ್ಲಿ ಭೇಟಿಯಾದಾಗ ಹೇಳಿದೆ. ಅದರಿಂದ ನಾನು ನಿನಗೆ ಐವತ್ತು ಲಕ್ಷ ರೂಪಾಯಿ ಪಡೆವ ಕುರಿತು ಪ್ಲಾನ ಹಾಕಿಕೊಟ್ಟೆ. ಎಂತಹದನ್ನಾದರೂ

ಸಾಧಿಸಬಲ್ಲದೆಂದು ನಿನ್ನ ಕೂಟದ ಬಗ್ಗೆ ಬಹಳ ಹೊಗಳಿಕೊಂಡೆ. ನಾನು ನಿನ್ನ ಹೇಳಿಕೆ ನಿಜವೆಂದು ನಂಬಿದೆ. ಈಗ ನೋಡಿದರೆ ಅವುಗಳೆಲ್ಲಾ ಉತ್ತರ ಕುಮಾರನ ಪೌರುಷಗಳಂತಿವೆ. ಇಲ್ಲದಿದ್ದರೆ ನಿಮ್ಮಲ್ಲಿ ಕೆಲವರಿಗೆ ಇಷ್ಟವಿಲ್ಲವೆಂದರೇನು ? ಓಟಿಂಗಾ ಎಂದರೇನು?"

ಚಂಚಲಾದೇವಿ ಕುರ್ಚಿಯಿಂದ ಸರ್ರನೆ ಮೇಲಕ್ಕೆದ್ದಳು.

"ನಾನು ಕಾಗದದ ಹುಲಿಗಳ ಬಳಿಗೇ ಬಂದೆ ಯಾವೋನಾದರೂ ಒಬ್ಬ ಧೈರ್ಯಶಾಲಿಯ ಬಳಿಗೆ ಹೋಗಿದ್ದರೆ ಚೆನ್ನಾಗಿರುತ್ತಿತ್ತು. ಕೈಲಾಗದ ಹೇಡಿಗಳ ಬಳಿಗೆ ಬಂದೆ. ಏನೂ ಕೈಲಾಗದ ಹೇಡಿಗಳಿಂದ ಯಾವ ಕೆಲಸ ತಾನೇ ಸಾಧ್ಯ ? ನಿಮ್ಮ ಬಳಿಗೆ ಬಂದು ಚಿಂತಿಸಬೇಕಾದ ದುರ್ಗತಿ ಹಿಡಿಯಿತು."

—ಎಂದು ಹೇಳುತ್ತಾ ಸ್ಟ್ಯಾಂಡಿನ ವಂಕಿಗೆ ತಗುಲಿಸಿದ್ದ ಓವರ್ ಕೋಟ ತೆಗೆದುಕೊಳ್ಳಲು ಹೋದಳು.

"ಚಂಚಲಾ ಟೇಕಿಟ್ ಈಜೀ....ನೀನು ಸರಿಯಾದ ಸ್ಥಳಕ್ಕೇ ಬಂದಿರುವೆ ಜಾನ್ ಬೆಟ್ಟಗಳನ್ನೂ ಸಹ ಪುಡಿ ಪುಡಿ ಮಾಡಬಲ್ಲ. ಸುಂದರ ಸಮುದ್ರದ ಮೇಲಾಗಲಿ ಲೀಲಾಜಾಲವಾಗಿ ಡ್ರೈವ್ ಮಾಡಬಲ್ಲ. ಆ ಮೇಲೆ ನಾನಿದ್ದೇನೆ. ಈ ಮೈಕಲ್ ಇವರನ್ನು ಪ್ರೇರೇಕ್ಷ ಮಾಡುತ್ತ ವಿಜಯಲಕ್ಷ್ಮಿಯನ್ನು ಸಾಧಿಸಬಲ್ಲ ನಿನ್ನ ಸಾಕ್ಷಾತ್ ವೀರರಾಣಿಯಂತೆ ನೀನಿರುವೆ. ಈ ದರೋಡೆಕೋರರಿಗೆ ಇಂದಿನಿಂದ ನೀನೇ ರಾಣಿ. ನಿನ್ನ ನಾಯಕತ್ವದಲ್ಲಿ ನಾವು ಊಹಿಸದೇ ಇರುವುದೆಲ್ಲಾ ಮಾಡಿ ಜಯಭೇರಿ ಭಾರಿಸೋಣ ಜಯಭೇರಿಯಿಂದ ನೂತನ ಪ್ರಪಂಚದೊಳಕ್ಕೆ ಪ್ರಯಾಣ ಮಾಡೋಣ."

ಮೈಕಲ್ ಅವಳನ್ನು ಸಮಾಧಾನ ಪಡಿಸುತ್ತಾ ಕೈ ಹಿಡಿದುಕೊಂಡು ಕುಳಿತುಕೊಳ್ಳುವಂತೆ ಕುರ್ಚಿ ತೋರಿಸಿದನು.

ಅವಳು ಅವನ ಕಡೆ ತೀಕ್ಷ್ಣವಾಗಿ ನೋಡಿದಳು. ಅವನ ಕೈ ಹಿಡಿತದಿಂದ ತನ್ನ ಕೈಯನ್ನು ಬಿಡಿಸಿಕೊಂಡಳು. ಪುನಃ ಮೂವರನ್ನು ಪರೀಕ್ಷೆಯಿಂದ ನೋಡಿದಳು.

"ಚಂಚಲಾ ಈ ತಂಡಕ್ಕೆ ನಾಯಕಿಯಾಗುವುದು ಸಂತೋಷಕರ ಆದರೂ, ನಾವು ಈ ದರೋಡೆಯಲ್ಲಿ ಜಯಗಳಿಸುವುದು ಸಂದೇಹಾಸ್ಪದವಾಗಿದೆ"

ಸುಂದರ ತನ್ನ ಸಂಶಯವನ್ನು ತಿಳಿಸಿದ.

"ನಿನ್ನಲ್ಲಿನ ಭಯ ನಿನ್ನಲ್ಲಿಯೇ ಅಡಗಿಸಿಕೋ ಸುಂದರ! ಅನಾವಶ್ಯಕವಾಗಿ ಚರ್ಚಿಸಬೇಡ. ನಿನಗೆ ಇಷ್ಟವಿಲ್ಲದಿದ್ದರೆ ನಿನ್ನ ದಾರಿ ನೀನು ನೋಡಿಕೋ. ನಮಗೆ ಧೈರ್ಯವಿದೆ, ಸಾಹಸವಿದೆ; ಚಾಕಚಕ್ಯತೆಯ ಚತುರತೆಯಿದೆ. ನಮ್ಮ ಕಾರ್ಯ ನಾವು ನೋಡಿಕೊಳ್ಳಬಲ್ಲೆವು. ನಿನ್ನ ಸುಕೋಮಲವಾದ ಶರೀರವನ್ನು, ಆರಡಿಗಳ ದೃಢವಾದ ದೇಹವನ್ನು ಚಿಕನ್ ಬರಿಯಾನಿ, ಮೊಟ್ಟೆಗಳಿಂದ, ಆ್ಯಫಲ್ ಹಣ್ಣುಗಳಿಂದ ಇನ್ನೂ ಸುದೃಢವಾಗಿ ಬೆಳೆಸು! ಮಾಂಸದ ಖಂಡಗಳನ್ನು ಚೆನ್ನಾಗಿ ಬೆಳೆಸು!! ನಿನ್ನೆತ್ತರದ ನಿಲುವು ಕನ್ನಡಿಯ ಮುಂದೆ ನಿಂತು ನಿನ್ನ ಅದ್ಭುತವಾದ ಪರ್ಸನಾಲಿಟಿಯನ್ನು ನೋಡಿ ಕೋ. ನೋಡಿಕೊಂಡು ನಿನಗೆ ನೀನೇ ಒಂದು ಸರ್ಟಿಫಿಕೇಟ್ ಕೊಟ್ಟುಕೊಂಡು ಮಹದಾನಂದಪಡು. ನೀನು ಇಲ್ಲಿಂದ ಎಷ್ಟು ಬೇಗ ತೊಲಗಿ ಹೋಗುವೆಯೋ ಅಷ್ಟು ನಮಗೆ ಒಳ್ಳೆಯದು."

ಚಂಚಲಾ ಸವಾಲು ಹಾಕಿದಳು—ಆಜ್ಞಾಪಿಸಿದಳು.

ಚಂಚಲಾ ಉದ್ರೇಕದಿಂದ ಮಾತನಾಡುತ್ತಿದ್ದಾಗ ಆಕೆಯ ಸ್ತನಗಳು ಕಂಪಿಸುವುದನ್ನು ಗಮನಿಸಿದ ಸುಂದರ.

"ಹುಚ್ಚು-ಹುಚ್ಚಾಗಿ ಮಾತನಾಡಬೇಡ ಚಂಚಲಾದೇವಿ! ಪದೇ-ಪದೇ ಆಲೋಚಿಸುತ್ತಾ ಹಗಲುಗನಸುಗಳನ್ನು ಕಾಣಬೇಡ. ನಿನ್ನ ಸುಂದರ, ಅಮೂಲ್ಯವಾದ ಪ್ರಾಣವನ್ನು ಕಳೆದುಕೊಳ್ಳಬೇಡ."

"ಸುಂದರ ನೀನು ಕೈಲಾಗದವ. ರಾತ್ರಿ ವೇಷಗಾರ. ನಿನ್ನಂಥ ಕೆಲಸಕ್ಕೆ ಬಾರದ ಅಸಮರ್ಥ. ಪ್ಲೀಜ್....ಗೆಟೌಟ್. ನೀನು ಇಲ್ಲದ ಮಾತ್ರಕ್ಕೆ ಪ್ರಪಂಚವೇನೂ ಮುಳುಗುವುದಿಲ್ಲ. ನಾವು ಧೈರ್ಯ ಸಾಹಸಗಳಿಂದ ಮುನ್ನುಗ್ಗಿ ಹಿಡಿದ ಕೆಲಸ ಸಾಧಿಸಬಲ್ಲೆವು"

ಚಂಚಲಾ ತೀವ್ರವಾಗಿ ಹೇಳಿದಳು.

ಸುಂದರನ ಪೌರುಷಕ್ಕೆ ಕೊಡಲಿ ಪೆಟ್ಟು ಬಿತ್ತು. ಕೇವಲ ಒಂದು ಹೆಂಗಸು ಅಲ್ಲದೇ ಅಪರಿಚಿತಳು, ಐದು ನಿಮಿಷಗಳ ಪರಿಚಯದಿಂದ ತನ್ನನ್ನು ಈ ರೀತಿ ಅವಮಾನಿಸುತ್ತಿರುವುದು ಅವನಿಗೆ ಸಹಿಸದಾಯಿತು. ಅವನ ನಾಸಿಕ ಪುಟಗಳು ವಿಶಾಲವಾದವು. ಕೈ ಹಸ್ತಗಳು ಬಿಗಿದುಕೊಂಡವು. ಆವೇಶ ಎಲ್ಲೆ

ಮೀರಿತು. ಅವಳನ್ನು ಸಮೀಪಿಸಿದ. ತೀಕ್ಷ್ಣವಾಗಿ ಅವಳ ಕಣ್ಣುಗಳಲ್ಲಿ ಮಿಲನಗೊಳಿಸಿ ದೃಷ್ಟಿ ಹರಿಸಿದ.

"ನನ್ನನ್ನು ಇಲ್ಲಿಂದ ಹೊರಟು ಹೋಗೆಂದು ಹೇಳಲು ನೀನ್ಯಾರು ? ನೀನೇ ಅಲ್ಲ; ನಿನ್ನನ್ನು ಹುಟ್ಟಿಸಿದ ಬ್ರಹ್ಮ ಬಂದರೂ ನನ್ನನ್ನು ಇಲ್ಲಿಂದ ಕಳಿಸಲು ಸಾಧ್ಯವಿಲ್ಲ.

"ನೀನು ಕೈಲಾಗದ ಹೇಡಿ. ಕೆಲಸಕ್ಕೆ ಬಾರದ ಸೋಮಾರಿ. ಮಾತು ಮಾತ್ರ ಚೆನ್ನಾಗಿ ಮಾತನಾಡುವೆ. ಮತ್ತೊಂದುಸಾರಿ ಹೇಳುತ್ತಿದ್ದೇನೆ. ಪ್ಲೀಜ್ ಗೆಟವುಟ್."

ಚಂಚಲಾಳ ಕಂಠ ಕಂಚಿನಂತೆ ಮೊಳಗಿತು.

ಸುಂದರ ಕೋಪವನ್ನು ನಿಗ್ರಹಿಸಿಕೊಳ್ಳಲಾರದವನಾದ. ಅವಳನ್ನು ಹೊಡೆಯಲು ಕೈ ಮೇಲಕ್ಕೆತ್ತಿದ.

ಅವಳು ಸ್ತನಗಳನ್ನು ಮುಂದಕ್ಕೆ ಉಬ್ಬಿಸಿ, ತಲೆಯನ್ನು ಹಿಂದಕ್ಕೆ ತಗ್ಗಿಸಿ ಆವನ ಮುಖವನ್ನು ತೀಕ್ಷ್ಣವಾಗಿ ನೋಡಿದಳು.

ಅವನ ಹೃದಯವನ್ನು ಇರಿಯುವಂತೆ ಮುನ್ನುಗ್ಗಿದ ಆವಳ ತುಂಬು ಸ್ತನಗಳನ್ನೂ, ಹಿಂದಕ್ಕೆ ತಗ್ಗಿ ಮೋಹಕ ಭಂಗಿಯಲ್ಲಿದ್ದ ಅವಳ ಮುಖವನ್ನೂ ಕಂಡು ತನ್ನ ಪ್ರಯತ್ನ ಹಿಂದೆಗೆದುಕೊಂಡು ಸುಂದರ.

ಚಂಚಲಾ ವ್ಯಂಗ್ಯವಾಗಿ ನಕ್ಕಳು.

"ಏಕೆ ಸುಮ್ಮನಾದೆ. ಕೈಲಾದರೆ ಹೊಡೆ. ನಾನು ನಿನ್ನಂತೆ ಕೈಲಾಗದ ಹೇಡಿಯಲ್ಲ. ನಿನ್ನ ಏಟನ್ನು ಭರಿಸಲಾರೆನೆಂಬ ಭಯ ನನಗಿಲ್ಲ. ಹುಂ ಹೊಡೆ...."

—ಎಂದಳು ಚಂಚಲಾ ನಗುತ್ತಾ.

ಮೈಕಲ್ ಜಾನ್‌ರು ನಗತೊಡಗಿದರು. ಅವರೊಂದಿಗೆ ಫರೀದನೂ ನಗದೇ ಇರಲಾರದವನಾದ.

ಸುಂದರ ಎಲ್ಲರ ಕಡೆಗೂ ತೀಕ್ಷ್ಣವಾಗಿ ಒಂದುಸಾರಿ ನೋಡಿ, ಸೀರಿಯಸ್ಸಾಗಿಯೇ ಬಾಗಿಲ ಕಡೆಗೆ ನಡೆದನು.

"ಬಾ... ಸುಂದರ ! ಹೋಗಬೇಡ. ಬಂದು ಕುಳಿತುಕೋ. ಚಂಚಲಾ ನಿನ್ನನ್ನು ಟೆಸ್ಟ್ ಮಾಡುವ ಸಲುವಾಗಿ ಇಷ್ಟ ಬಂದಂತೆ ಮಾತನಾಡಿದಳು. ನಿನ್ನ

ಧೀರ ಹೃದಯದ ಗಂಡಸು; ವಿವೇಕಶಾಲಿಯಾದ ಶಕ್ತಿವಂತ. ಓರ್ವ ಹೆಂಗಸಿನ ಮಾತು ನಿಜವೆಂದು ಇಲ್ಲಿಂದ ಹೊರಟು ಹೋಗಲು ಪ್ರಯತ್ನಿಸುತ್ತಿರುವೆ. ನೀನು ಇಲ್ಲಿಂದ ಹೊರಟು ಹೋಗಲು ಸಾಧ್ಯವಿಲ್ಲ. ನೀನು ನಮ್ಮೊಂದಿಗೇ ಇರಬೇಕು. ನಿನ್ನ ಶಕ್ತಿ ಸಾಹಸಗಳನ್ನು ಪ್ರದರ್ಶಿಸಬೇಕು. 'ಸುಂದರ' ಎಂದರೆ ಎಂತಹವನೆಂಬುದು ಹೆಮ್ಮೆಯಿಂದ ನಾನು ಚಂಚಲಾದೇವಿಗೆ ತಿಳಿಯಪಡಿಸಬೇಕು. ಕಮಾನ್....ಬಂದು ಕುಳಿತುಕೋ."

ಸುಂದರ ಸಂಶಯಿಸುತ್ತಾ ಅಲ್ಲಿಯೇ ನಿಂತ.

ಮೈಕಲ್ ಎದ್ದು ಹೋಗಿ ಸುಂದರನ ಭುಜದ ಮೇಲೆ ಕೈಹಾಕಿ ಕರೆತಂದು ಕುರ್ಚಿಯಲ್ಲಿ ಕೂರಿಸಿದ.

ಕೊಠಡಿಯಲ್ಲಿ ಒಂದು ನಿಮಿಷ ಮೌನ ತನ್ನ ಸಾಮ್ರಾಜ್ಯ ಸ್ಥಾಪಿಸಿತು.

"ನಾನು ಹೇಳುತ್ತಿರುವುದು ಸತ್ಯ ಚಂಚಲಾ! ನಮ್ಮ ಕೂಟ ವಿಶೇಷ ಯುತವಾದುದ್ದೇ. ಈಗ ಬಂದಿರುವ ತೊಡಕೆಲ್ಲಾ ಅಪಾಯದಲ್ಲಿ ಎಲ್ಲಿ ಸಿಲುಕಿಕೊಳ್ಳುವೆವೋ ಎಂಬ ಭಯ ಒಂದೇ."

ಮೈಕಲ್ ಮತ್ತೆ ಹೇಳಿದ.

"ಯಾವ ಅಪಾಯವೂ ಇಲ್ಲದೆ ಅರ್ಧ ಕೋಟಿ ರೂಪಾಯಿಗಳು ಹೇಗೆ ಬರುತ್ತವೆಂದುಕೊಂಡಿರಿ ನಿಧಿ ನಿಕ್ಷೇಪಗಳಿಗಾಗಿ ;ಅನ್ವೇಷಣೆ ನಡೆಸುವಾಗ ಬಲಿದಾನ, ಆತ್ಮಾರ್ಪಣೆ ಆಕಸ್ಮಾತಾಗಿ ಕೊಡಲೇ ಬೇಕಾಗುತ್ತದೆ. ಅದರಂತೆಯೇ ಈ ಇಂಡಿಯಾ ಏಜನ್ಸೀಸ್ ಟ್ರಕ್ ದೋಚಿಕೊಳ್ಳುವ ಸಮಯದಲ್ಲಿ ತಪ್ಪನ್ನು ರಕ್ತಪಾತ ನಡೆಯಬಹುದು. ಒಂದು ಘನ ಕಾರ್ಯವನ್ನು ಸಾಧಿಸಲು ಮುನ್ನುಗ್ಗುವಾಗ ತೃಣಪ್ರಾಯವಾದ ಪ್ರಾಣಗಳನ್ನು ಕುರಿತು ಲೆಕ್ಕಿಸುವುದು ಕಾರ್ಯ ಸಾಧಕರ ಲಕ್ಷಣಗಳಲ್ಲ."

"ಮಿಸ್ಟರ್ ಸುಂದರ ಹತ್ತುಲಕ್ಷ ರೂಪಾಯಿ ನಿನಗೆ ಹಸ್ತಗತವಾಗುವ ಸಮಯದಲ್ಲಿ ನಿನ್ನ ಅಂಗಡಿಗಳ ಸುಕುಮಾರ, ಸುದೃಢ ಶರೀರದ ಯಾವ ಮೂಲೆಯಲ್ಲಾದರೂ ಸ್ವಲ್ಪ ಪಂಚೇರ್ ಆಗುವುದೆಂಬ ಭಯ ಆವರಿಸಿಕೊಂಡು ನಡಗುತ್ತಿರುವೆಯಾ? ಡ್ಯಾಮ್ ಸಿಲಿ ಯು ಬುಲ್ !"

ಚಂಚಲಾ ಸುಂದರನ ದೃಢವಾದ ಶರೀರ ಹಾಗು ಮುಖವನ್ನು ನೋಡಿ ನೇರವಾಗಿ ಹೇಳಿದಳು,

"ನನಗೆ ಕೈಕಾಲು ಮುರಿಯುತ್ತವೆಂದಾಗಲಿ, ಪ್ರಾಣವೇ ಕಳೆಯುತ್ತೆಂದಾಗಲಿ ಭಯವಿಲ್ಲ, ಅಂತಹ ಭಯ ಹೆಂಗಸಾದ ನಿನಗೆ ಇದ್ದರೂ ಇರಬಹುದು, ನನ್ನ ಭಯವೆಲ್ಲಾ ಇದುವರೆವಿಗೂ ನಮ್ಮ ದರೋಡೆಗಳಲ್ಲಿ ಒಂದು ಕೊಲೆಯನ್ನೂ ಮಾಡದೇ ಯುಕ್ತಿಯಿಂದ ಓಡಿಕೊಂಡು ಬರುತ್ತಿದ್ದೇವೆ. ಈಗ ಈ ಅಪಾರ ಸಂಪತ್ತಿಗಾಗಿ ಅನೇಷ್ಟು ಕೊಲೆಮಾಡಿ, ರಕ್ತದ ಕಾಲುವೆ ಹರಿಯಬೇಕಾಗುತ್ತದೋ ಎಂದು ಚಿಂತಿಸುತ್ತಿದ್ದೇನೆ"

ಚಂಚಲಾಳ ಸೌಂದರ್ಯವನ್ನು ಕಂಡು ತುಟಿ ತೇವ ಮಾಡಿಕೊಂಡ ಫರೀದ್ ಅವಳ ಸವಾಲಿಗೆ ಚಕಿತನಾದ.

ಮಧುರ ಕೋರಿಕೆಗಳಿಂದ ಬಿಸಿಯೇರಿದ್ದ ಶರೀರವನ್ನು ಸ್ವಾಧೀನಕ್ಕೆ ತಂದುಕೊಂಡು ಜಾನ್, ಚಂಚಲಾದೇವಿಯೊಂದಿಗೆ ಅನಾವಶ್ಯವಾಗಿ ಚರ್ಚಿಸುವುದು ಬೆಂಕಿಯ ಜೊತೆ ಸರಸವಾಡಿದಂತೆ ಎಂದುಕೊಂಡನು. ಐದು ಕಾಗದದ ಚೂರುಗಳನ್ನು ಟೇಬಲಿನ ಡ್ರಾಯರ್‌ನೊಳಗಿನಿಂದ ಹೊರ ತೆಗೆದು' ಒಬ್ಬೊಬ್ಬರಿಗೆ ಒಂದೊಂದು ಕಾಗದ ಕೊಟ್ಟರು.

"ಡಿಯರ್ ಫ್ರೆಂಡ್ಸ್! ಇಂಡಿಯಾ ಏಜನ್ಸೀಸ್ ಟ್ರಕ್ಕನ್ನು ದರೋಡೆ ಮಾಡಿ ಐವತ್ತು ಲಕ್ಷ ರೂಪಾಯಿ ಶೇಖರಿಸುವುದು ನಮ್ಮ ಉದ್ದೇಶ. ಅದು ನಮ್ಮಲ್ಲಿ ಕೆಲವರಿಗೆ ಇಷ್ಟವಿಲ್ಲ. ಅದಕ್ಕಾಗಿ ಓಟಿಂಗ್ ಪದ್ಧತಿಯನ್ನು ನಡೆಸುತ್ತಿದ್ದೇವೆ. ನಿರ್ಭಯವಾಗಿ ನಿಮ್ಮ ಅಭಿಮತಗಳನ್ನು ತಿಳಿಸಬಹುದು. ಮೆಜಾರಿಟಿ ನಿರ್ಣಯಕ್ಕೆ ನಾವು ಅಡಿಯಾಳಾಗಬೇಕು. ಅಂದರೆ ನಮ್ಮಲ್ಲಿ ಮೂವ್ವರು 'ಹೌದು!, ಎಂದರೆ ಮಿಕ್ಕ ಇಬ್ಬರೂ ಅವರಿಗೆ ಇಷ್ಟವಿಲ್ಲದಿದ್ದರೂ ಮಿಕ್ಕವರೊಂದಿಗೆ ಜೊತೆಗೂಡಿ ದರೋಡೆಯಲ್ಲಿ ಭಾಗವಹಿಸಬೇಕು ನಿಮ್ಮೆಲ್ಲರಿಗೂ ನನ್ನ ಕೇಳಿಕೆ ಒಂದೇ. ಒಂದು ಏಕ ಕಂಠದಿಂದ 'ಹೌದು' ಎಂದು ನುಡಿಯೋಣ! ಏಕ ಮಾರ್ಗದಲ್ಲಿ ಪಯಣಿಸೋಣ!...."

ಮೈಕಲ್‌ನ ಸಂದೇಶಕ್ಕೆ ಚುಂಚಲಾ ನುತೆ್ತಂದು ಸಲಹೆ ಜೊತೆಗೊಡಿಸಿದಳು.

"ಧಾರಾಳವಾಗಿ ಹಣ ದೋಚಿಕೊಳ್ಳೋಣ. ಸರಳವಾಗಿ ಹಂಚಿಕೊಳ್ಳೋಣ

ಎಲ್ಲರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಕಾಗಗದ ಚೂರುಗಳ ಮೇಲೆ ಬರೆದು ಮೈಕಲ್‌ಸಿಗೆ ಕೊಟ್ಟರು.

ಅವುಗಳನ್ನು ಓದಿದ ಮೈಕಲ್ ಆಶ್ಚರ್ಯಗೊಂಡ. ಅವನ ಕಣ್ಣುಗಳು ಆನಂದದಿಂದ ಕಂಗೊಳಿಸಿದವು.

"ಹೌದು!....ಹೌದು!....ಹೌದು;...."

ಎಲ್ಲರೂ ಹೌದೆಂದೇ ಬರೆದಿದ್ದರು. ಎಲ್ಲಾ ಇಂದ್ರಜಾಲದಂತೆ ಕಾಣಿಸಿತು. ಸೌಂದರ್ಯರಾಣಿ ಚಂಚಲಾದೇವಿಯೇ ಈ ರೀತಿ ಬದಲಾವಣೆಗೆ ಕಾರಣಳೆಂದು ತಿಳಿದುಹೋಯಿತು.

ಕೊಠಡಿಯಲ್ಲಿನ ವಾತಾವರಣ ಶಾಂತಗೊಂಡಿತು.

ಹೌದು ಆ ಪಾತ್ರ ನಟಿಸುತ್ತೇನೆ. ಚೆನ್ನಾಗಿರುವುದಿಲ್ಲವೇ ?"

—ಎಂದು ಕೇಳಿದಳು ಚಂಚಲಾ.

"ಚೆನ್ನಾಗಿರುತ್ತದೆ."

"ಯಾರಿಗೂ, ಯಾವ ರೀತಿಯಲ್ಲಿಯೂ ಸಂಶಯ ಬಾರದ ರೀತಿಯಲ್ಲಿ ಆ ಪಾತ್ರ ಚೆನ್ನಾಗಿ ನಟಿಸುತ್ತೇನೆ ಹೌದೇ ?"

"ನಿನ್ನ ಬಳಿ ಪಿಸ್ತೂಲಿರುತ್ತದೆಂದೂ, ಗಾರ್ಡ ಸ್ಮೈಯದ್ ನಿನ್ನ ಬಳಿಗೆ ಛಟಕ್ಕನೇ ಅವನಿಗೆ ಗುರಿಯಿಟ್ಟು ಹ್ಯಾಂಡ್ಸಪ್ ಎನ್ನುತ್ತಾ ಬೆದರಿಸುವೆಯೆಂದು ಕೇಳಿದೆ ನಿಜ ತಾನೆ."

"ನಿಜ."

"ಗಾರ್ಡ ಸ್ಮೈಯದ್ ಸಾಹಸಿಕನೆಂದೂ.... ನಿನ್ನ ಪಿಸ್ತೂಲಿಗೆ ಬಹಳ ಬೇಗ ಶರಣಾಗುವುದಿಲ್ಲವೆಂದು ಸುಂದರ ಹೇಳಿದ. ಏನು ಮಾಡುವೆ ?"

"ಗುಂಡು ಹಾರಿಸಿ ಅವನ ಪ್ರಾಣ ಬಲಿ ತೆಗೆದುಕೊಳ್ಳುತ್ತೇನೆ. ಐವತ್ತು ಲಕ್ಷ ರೂಪಾಯಿಗಳಿಗೆ ಕೇವಲ ಐದು ಮಂದಿಯನ್ನು ಕೊಲೆ ಮಾಡಿದರೆ ಅದರಲ್ಲಿ ದೊಡ್ಡಸ್ತಿಕೆಯೇನೂ ಇರಲಾರದು.'

ಚಂಚಲಾಳ ಸ್ವರದಲ್ಲಿ ಕಠೋರತೆ ಧ್ವನಿಸಿತು.

ಫಾದವನಿಗೆ ಶರೀರವೆಲ್ಲಾ ಬೆವರು ಆವರಿಸಿಕೊಂಡಿತು. ಆ ಸಮಯ ಸಾಧ್ಯವಾದರೆ ಐದು ಮಂದಿಯಲ್ಲಿ ತಾನು ಇಲ್ಲದಿರುವಂತೆ ಕಾಪಾಡೆಂದು ಅಲ್ಲಾನಿಗೆ ಪ್ರತ್ಯೇಕವಾಗಿ ಪ್ರಾರ್ಥನೆ ಮಾಡಿದನು.

"ಈ ವ್ಯರ್ಥವಾದ ಪ್ರಶ್ನೆಗಳಿಂದ ಯಾವ ಪ್ರಯೋಜನವೂ ಇಲ್ಲ. ನಮ್ಮ ಮುಂದಿನ ಕಾರ್ಯಕ್ರಮವೇನು ?"

ಕುತೂಹಲದಿಂದ ಕೇಳಿದ ಜಾನ್.

"ಮಿಸ್ ಚಂಚಲಾದೇವಿ ಎಲ್ಲಾ ಜಾಗರೂಕತೆಗಳನ್ನು ತೆಗೆದುಕೊಂಡಿದ್ದಾಳೆ. ಪ್ರತಿ ಚಿಕ್ಕ ಪಾಯಿಂಟನ್ನೂ ಸಹ ಕುರಿತು ಚೆನ್ನಾಗಿ ಆಲೋಚಿಸಿದ್ದಾಳೆ. ಸಂಪೂರ್ಣ ಯೋಜನೆಯನ್ನು ಸಿದ್ಧ ಮಾಡಿಸಿದ್ದಾಳೆ ಆಕ್ಟರ್ ನೋಟಿಸ್ ಸಹ ಸಿದ್ಧ ಮಾಡಿದ್ದಾಳೆ. ಬಹು ಜಾಗ್ರತೆಯಿಂದ ತಯಾರಿಸುತ್ತಿರುವ ಈ ಪ್ಲಾನ್ ಸಕ್ಸೆಸ್ ಆಗುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ."

—ಎಂದು ಹೇಳಿದ ಮೈಕಲ್.

"ನಾನು ಕೇಳುತ್ತಿರುವುದೇ ಬೇರೆ ನಾವು ಊಹಿಸಿಕೊಂಡಂತೆಯೇ ಟ್ರಕ್ ನಿಲ್ಲಿಸಿದೆನೆಂದುಕೊಳ್ಳಿ. ಅಷ್ಟು ಮಾತ್ರಕ್ಕೆ ಸಮಸ್ಯೆ ಪರಿಹಾರವಾದಂತೆಯೇ ಏನು ? ಎಷ್ಟು ಮಾತ್ರವೂ ಅಲ್ಲವೇ ಅಲ್ಲ. ವೈರ್‌ಲೆಸ್ ಮೂಲಕ ಪ್ರತಿ ನಿಮಿಷವೂ ಗಾರ್ಡ್ ಸ್ಪೈಯರ್ ಏಜನ್ಸಿಯ ಜೊತೆ ಕಾಂಟ್ಯಾಕ್ಟ್ ಮಾಡುತ್ತಲೇ ಇರುತ್ತಾನೆ. ಅಕಸ್ಮಾತ್ತಾಗಿ ಕಂಟಿನ್ಯೂಟಿ ಕಳೆದುಕೊಂಡರೆ ಅವರಿಗೆ ಅನುಮಾನ ಬರುವುದಿಲ್ಲವೇ ? ಬಂದ ಕೂಡಲೆ ಸರ್ಚಿಂಗ್ ಪ್ರಾರಂಭವಾಗುತ್ತದೆ ಮಾಮೂಲ ಪೋಲೀಸರು, ರಿಸರ್ವ ಪೊಲೀಸರು ಪತ್ತೇದಾರಿಕೆ ಪ್ರಾರಂಭಿಸುತ್ತಾರೆ ಅಷ್ಟೇ ಅಲ್ಲ ಇದು ಐವತ್ತು ಲಕ್ಷ ರೂಪಾಯಿಗಳ ಪ್ರಾಬ್ಲಮ್ ಆದುದರಿಂದ ಹೆಲಿಕ್ಯಾಪ್ಟರಗಳೂ ಸಹ ಪತ್ತೇ ಕಾರ್ಯರಂಗದೊಳಕ್ಕೆ ಧುಮುಕುತ್ತವೆ. ಕೇವಲ ಕೆಲವೇ ನಿಮಿಷಗಳಲ್ಲಿ ಟ್ರಕ್‌ನ್ನು ಪತ್ತೇ ಮಾಡುತ್ತಾರೆ ಪ್ರಪಂಚವನ್ನೇ ಪ್ಯಾಂಟು ಜೋಬಿನೊಳಕ್ಕೆ ಇಟ್ಟುಕೊಳ್ಳಬಲ್ಲೆನೆಂಬ ಧಮ್ಮ ನಮಗಿದೆ. ಆ ಆಸೆ ಒಳ್ಳೆಯದೇ ಆದರೂ, ಯಾರ ಕಣ್ಣಿಗೂ ಬೀಳದಂತೆ ಅಷ್ಟು ದೊಡ್ಡ ಟ್ರಕ್ಕನ್ನು ಯಾರ ಹೊಟ್ಟೆಯಲ್ಲಿಟ್ಟುಕೊಂಡು ಅಡಗಿಸಬಲ್ಲೆವು ಹೇಳಿ."

ವಿವರವಾಗಿ ಕೇಳಿದ ಜಾನ್.

ಆ "ಅನುಮಾನ ನನಗೂ ಇದೆ ಆದರೆ ಮಿಸ್ ಚಂಚಲಾದೇವಿ ತಾನು ಎಲ್ಲವನ್ನೂ ಆಲೋಚಿಸಿ ಪ್ಲಾನ್ ಸಿದ್ಧ ಮಾಡಿಟ್ಟಿದ್ದೇನೆಂದು ಹೇಳಿದಳು. ಆ ವಿಷಯ ಆಕೆಯೇ ಹೇಳುತ್ತಾಳೆ."

—ಎಂದ ಮೈಕಲ್.

"ಹೌದೇ ಮಿಸ್ ಚಂಚಲಾದೇವಿ ಆಲೋಚಿಸಿರುವೆಯಾ ?"

ಜಾನ್ ಚಂಚಲಾಳ ಮುಖವನ್ನು ನೋಡುತ್ತಾ ಕೇಳಿದನು.

"ಹೌದು ಜಾನ್ ನಾನೆಲ್ಲ ಪ್ಲಾನ್ ಸಿದ್ಧ ಮಾಡಿಟ್ಟಿದ್ದೇನೆ. ಅದೇ ಎರಡನೆಯ ಹೆಜ್ಜೆ ನಮ್ಮ ಸಾಹಸಗಳೆಲ್ಲಾ ಆ ಹೆಜ್ಜೆಯಲ್ಲಿ ಅಡಗಿವೆ. ಅವುಗಳನ್ನು ನಾಳೆ ಹೇಳುತ್ತೇನೆ."

—ಎಂದು ಹೇಳಿದಳು ಚಂಚಲಾ.

"ನಿನ್ನ ಇಷ್ಟ. ಹಾಗೆಯೇ ಮಾಡು. ನನ್ನಲ್ಲಿ ಕೆಲವು ಸಂದೇಹ ಮನೆ ಮಾಡಿಕೊಂಡಿವೆ. ಅವುಗಳಿಗೆ ಉತ್ತರ ಹೇಳುವೆಯಾ ?"

"ಕೇಳು"

"ಆದೆಂತಹ ಹಳ್ಳ ದಿಣ್ಣೆಗಳ ರೋಡಾದರೂ, ಟ್ರಾಫಿಕ್ ಹೆಚ್ಚಿಗೆ ಇಲ್ಲದೇ ಇದ್ದರೂ ಯಾವುದಾದರೂ ಒಂದು ಗಾಡಿಯೋ, ಲಾರಿಯೋ, ಕಾರೋ, ಟ್ರಕ್ಕೋ ಹಿಂದೆ ಬರಲು ಸಾಧ್ಯ ತಾನೇ?....ಆಗ ಏನು ಮಾಡೋಣ?"

"ವೆರೀ ಸಿಂಪಲ್ ಖಾಸಗಿ ಮಾರ್ಗದಿಂದ ಹಳ್ಳ ದಿಣ್ಣೆಗಳ ರೋಡು ಸೀಳುವ ಮಧ್ಯ ಸ್ಥಳದಲ್ಲಿ ರೋಡ ಅಂಡರ್ ರಿಪೇರ್ ಎಂಬ ಬೋರ್ಡು ಇರಿಸಬೇಕು. ಆ ಕೆಲಸ ಟ್ರಕ್ ಆ ಸೀಳು ಹಾದಿ ದಾಟಿದ ಕೂಡಲೇ ಮಾಡಬೇಕು. ಒನ್ ವೇ ಟ್ರಾಫಿಕ್ ಆದುದರಿಂದ ಎರಡನೇ ಕಡೆಯಿಂದ ಯಾವ ವಾಹನಗಳೂ ಎದುರಿಗೆ ಬರುವುದಿಲ್ಲ."

"ನಾವು ಟ್ರಕ್ ವಶಪಡಿಸಿಕೊಂಡೆವು ಆದನ್ನು ಎಲ್ಲಿಯೋ ಅಡಗಿಸಿದ ಬಳ್ಳಿವು. ಎಲ್ಲವೂ ಸುಗಮವಾಗಿ ನಡೆಯಿತೆಂದೇ ತಿಳಿದುಕೊಳ್ಳಿ. ಆಮೇಲೆ ಆದನ್ನು ತೆರೆಯುವುದು ಹೇಗೆ? ಆ ಅದೃಷ್ಟ ದೇವತೆಯಾದ ಭಾಗ್ಯಲಕ್ಷ್ಮಿಯನ್ನು ಆಲಿಂಗಿಸಿಕೊಳ್ಳುವುದು ಹೇಗೆ?"

ಆಗಲೇ ಹಣದಾಶಾಪೀಡಿತನಾಗಿ ಕೇಳಿದ ಜಾನ್.

"ನಮ್ಮ ಪಕ್ಕದಲ್ಲಿ ಫರೀದ್ ಜೀ ಇರುವಷ್ಟು ಕಾಲ ಆ ಆಲೋಚನೆ ಮಾಡಬೇಕಾದ ಅವಶ್ಯಕತೆಯೇ ಇಲ್ಲ. ಟ್ರಕ್ಕನ್ನೂ ಆತನನ್ನೂ ಏಕಾಂತವಾಗಿ ಬಿಟ್ಟು ಬಿಡೋಣ ಅದರ ಜೊತೆಗೆ ಕುಸ್ತಿ ಆಡಲು ಆತನಿಗೆ ಬೇಕಾದಷ್ಟು ಸಮಯ ನೀಡೋಣ....ಖಜಾನೆಯನ್ನು ಕರಗಿಸಲು ಎಷ್ಟು ಕಾಲ ಹಿಡಿಯಬಹುದು ಫರೀದಜೀ?"

—ಎಂದು ಫರೀದನ ಕಡೆ ತಿರುಗಿ ಕೇಳಿದಳು ಚಂಚಲಾ.

"ಪರಿಸ್ಥಿತಿಗಳ ಆಧಾರಗಳನ್ನು ಪರಿಶೀಲಿಸಿ ಸಮಯ ನಿರ್ಣಯಿಸಬೇಕಾಗುತ್ತದೆ."

"ಮ್ಯಾಗ್ಜಿಮಮ್ ಒಂದು ತಿಂಗಳು ಕಾಲ ಸಾಕಾಗುತ್ತದೆಂದು ನನ್ನ ಭಾವನೆ."

—ಎಂದು ಹೇಳಿದಳು ಆಕೆ.

"ಸಾಕಾಗಬಹುದು. ಲಕ್ ಚೆನ್ನಾಗಿದ್ದರೆ ಇನ್ನೂ ಬೇಗ ಸುಲಭವಾಗಿ ಸಕ್ಸೆಸ್ ಆಗಬಹುದು."

—ಎಂದು ಹೇಳಿದ ಫರೀದ.

"ಏನೇ ಆದರೂ ಕೊನೆಯ ಅಧ್ಯಾಯದಲ್ಲಿ ನಿನ್ನದೇ ಸಾಹಸ ಫರೀದಜೀ ನಿನ್ನ ಕೈಗಳಿಂದಲೇ ಆ ಮಹಾಲಕ್ಷ್ಮಿಯನ್ನು ನಾವೆಲ್ಲರೂ ನೋಡಬೇಕಾಗಿದೆ."

—ಎಂದು ಹೇಳಿದ ಮೈಕಲ್.

"ಇಂದಿಗೆ ನಮ್ಮ ಕಾರ್ಯಕ್ರಮ ಮುಗಿಸೋಣ. ಮತ್ತೆ ನಾಳೆ ಇದೇ ಸ್ಥಳದಲ್ಲಿ ಜೊತೆಗೂಡೋಣ."

—ಎಂದು ಹೇಳಿದಳು ಚಂಚಲಾ ಸಮಾವೇಶವನ್ನು ಮುಕ್ತಾಯಗೊಳಿಸುತ್ತಾ.

ಚಂಚಲಾ ಸ್ಟಾಂಡಿನ ಮಂಕಿಗೆ ತಗುಲಿಸಿದ್ದ ಓವರಕೋಟು ತೆಗೆದುಕೊಂಡು ಧರಿಸಿ, ಮುನ್ನಡೆಯಿಟ್ಟಳು. ಕೂಡಲೇ ಒಂದು ಹೆಜ್ಜೆ ಹಿಂದಕ್ಕೆ ಹಾಕಿ ಎಲ್ಲರ ಕಡೆಗೂ ತಿರುಗಿ ನೋಡಿದಳು.

ಎಲ್ಲರೂ ಅವಳ ಮುಖವನ್ನು ಏನೆಂಬಂತೆ ಉತ್ಸಾಹದಿಂದ ನೋಡಿದರು.

ಸುಂದರನಂತೂ ಅವಳನ್ನು ಹಿಂಬಾಲಿಸಿ ಹೋಗಿ ತನ್ನ ಪ್ರಣಯ ವೇದನೆಯನ್ನು ತೋಡಿಕೊಳ್ಳಬೇಕೆಂದುಕೊಂಡಿದ್ದನು.

"ಡಿಯರ್ ಫ್ರೆಂಡ್ಸ್. ನಾನು ಯಾರೆಂಬುದು ಕುರಿತು ತಿಳಿಯಕೊಳ್ಳಬೇಕೆಂಬ ಅನಾವಶ್ಯಕ ಆಲೋಚನೆಗಳನ್ನು ಮಾತ್ರ ಇಟ್ಟುಕೊಳ್ಳಬೇಡಿ. ಹಿಂಬಾಲಿಸಿ ನನ್ನ ರಹಸ್ಯ ಕಂಡು ಹಿಡಿಯಲು ಪ್ರಯತ್ನಿಸಿದವರಿಗೆ ಪ್ರಾಣಾಪಾಯ ತಪ್ಪದು. ಈ ಮಿಸ್ ಚಂಚಲಾಳನ್ನು [illegible] ಕಾಣಿಸಬಹುದು. ಇವಳು ಸಾಮಾನ್ಯ ನಾರಿಯಲ್ಲ ವಿಚಿತ್ರ ಚೋರನಾರಿ. ಬಿ ಕೇರ್‌ಫುಲ್....ಹಗೆ ಯಿಟ್ಟರೆಂದರೆ ಪ್ರತೀಕಾರ ತೀರಿಸಿಕೊಳ್ಳದೇ [illegible]. ನಾಗರ ಹಾವು [illegible] ಈ ಚೋರನಾರಿ ಚಂಚಲಾ ಜೀವಿತವೆಲ್ಲಾ [illegible] ನಾನಿನ್ನು ಹೋಗಿ ಬರುತ್ತೇನೆ."

ಎಂದು ಹೇಳಿದವಳೇ ಸರಸರನೆ ನಡೆದು ಆ ಕೊಠಡಿಯನ್ನು ಬಿಟ್ಟು ಹೊರಗೆ ಹೊರಟುಹೋದಳು ಚಂಚಲಾ.

ತನ್ನ ಪ್ರಯತ್ನವನ್ನು ಅರ್ಥ ಮಾಡಿಕೊಂಡಳೇ ಎಂಬ ಭಾವನೆಯಿಂದ ಆಶ್ಚರ್ಯದಿಂದ ಅವಳು ಹೋಗುತ್ತಿದ್ದ ಕಡೆಯೇ ನೋಡತೊಡಗಿದನು ಸುಂದರ.

ಇಬ್ಬರು ವಿದೇಶಿ ದಂಪತಿಗಳು ಗೇಟಿನ ಮುಂದೆ ಟ್ಯಾಕ್ಸಿಯಲ್ಲಿ ಇಳಿದು, ಮೀಟರ್ ಹಣ ಸಲ್ಲಿಸಿ, ಗೇಟು ತೆಗೆದುಕೊಂಡು ಒಳ ಪ್ರವೇಶಿಸಿದರು.

ಸ್ಟೇಟ್‌ನಲ್ಲಿ ಬಿಜಿನೆಸ್ ಮಾಡುವುದು ಬಹು ಲಾಭದಾಯಕವಾದುದೆಂದು ಭಾವಿಸುವುದರಲ್ಲಿ ಕರುಣಾಕರನ್ ಮೊಟ್ಟ ಮೊದಲಿಯವನು ಅವರನ್ನು ನೋಡುತ್ತಲೇ ಅವನ ಮುಖ ಅರಳಿತು.

"ಸರೋಜಾ ಆಟೋ ಕ್ಲಿನಿಕ್ ತನ್ನ ಬರುವಿಕೆಯಿಂದ ಪಾವನವಾಯಿತು

—ಎನ್ನುತ್ತಾ ಲಗು ಬಗೆಯಿಂದ ಆಹ್ವಾನಿಸಿದ.

ರೋಜಾ ಕಲರ್ ಗೌನ್ ಧರಿಸಿ ರಬ್ಬರ್ ಬೊಂಬೆಯಂತಿದ್ದ ಆ ಸುಂದರ ಯೌವನಾಂಗಿ ಕನ್ನಡ ಬಂದೂ ಬಾರದವಳಂತೆ ಮಾತನಾಡುತ್ತಾ—

"ನಮ್ಮಸ್ಕಾರ"

—ಎನ್ನುತ್ತಾ ಒತ್ತಿ ನುಡಿದಳು.

ಅವಳ ಜೊತೆಯಲ್ಲಿದ್ದವನೂ ಸಹ ಭಾರತೀಯ ಪದ್ಧತಿ ಅನುಕರಿಸಿ ನಗುತ್ತಾ ಕೈ ಜೋಡಿಸಿದನು.

ಕರುಣಾಕರನ್ ಅವರಿಬ್ಬರನ್ನೂ ಅಫೀಸು ರೂಮಿಗೆ ಕರೆದುಕೊಂಡು ಹೋಗಿ ಕೂರಿಸಿದ. ಕೋ ಕೋ ಕೋಲಾ ಬಾಟಲ್ಸ್ ತರಿಸಿ ಇಬ್ಬರಿಗೂ ಕೊಟ್ಟನು.

ಕರುಣಾಕರನ್ ಅವರು ಬಂದ ವಿಷಯ ಕೇಳಲು ಸರಿಯಾಗಿ ಮುಂದಕ್ಕೆ ಬಗ್ಗಿ ಕುಳಿತನು.

ಮಿಸ್ಟರ್ ಅಂಡ್ ಮಿಸೆಸ್ ಡೇವಿಡ್‌ರೆಂದು ತಮ್ಮನ್ನು ಪರಿಚಯ ಮಾಡಿಕೊಂಡರು ಆ ದಂಪತಿಗಳು.

ಆ ಸುಂದರಿಗೆ ಇಪ್ಪತ್ತು ವರ್ಷಗಳಿರಬಹುದು. ಅವಳ ಪತಿಗೆ ಎರಡು ಮೂರು ವರ್ಷಗಳು ಹೆಚ್ಚಿರಬಹುದು. ಇಬ್ಬರಿಗೂ ಚೆನ್ನಾಗಿ ಜೊತೆಗೂಡಿತ್ತು. ಅವರ ಮುಖ ನೋಡಿದರೆ ನಿನ್ನೆಯೋ ಮೊನ್ನೆಯೋ ಮದುವೆ ಮಾಡಿಕೊಂಡವರಂತಿದ್ದರು.

ಕಿಲ ಕಿಲನೆ ನಗುತ್ತಾ ಆಗಾಗ ಪ್ರಣಯ ಚೇಷ್ಟೆಗಳನ್ನೂ ಮಾಡಿಕೊಳ್ಳುತ್ತಿದ್ದ ಅವರನ್ನು ನೂತನ ದಂಪತಿಗಳೆಂದು ಸುಲಭವಾಗಿ ತಿಳಿದುಕೊಳ್ಳಬಹುದಾಗಿತ್ತು.

ಅವರಿಬ್ಬರ ಅನ್ಯೋನ್ಯ ದಾಂಪತ್ಯವನ್ನು ಕಂಡು ಕರುಣಾಕರನ್ ಕಣ್ಣು ಉರಿಯತೊಡಗಿದವು.

ಆ ಸುಂದರಿ ಅವನ ಪಕ್ಕಕ್ಕೆ ಸರಿದಳು.

"ಡಾರ್ಲಿಂಗ್!"

—ಎಂದು ಅವನ ಕಿವಿಯಲ್ಲಿ ಏನೋ ಹೇಳಿದಳು.

ಮಿಸ್ಟರ್ ಡೇವಿಡ್ ನಗುತ್ತಾ ಸಿಗರೇಟು ಬೇಗಿಸಿದ. ಮತ್ತೊಂದು ಕರುಣಾಕರನಿಗೆ ಆಫರ್ ಮಾಡಿದನು.

"ನನಗೆ ಟೈಮ್ ವೇಸ್ಟ್ ಮಾಡುವುದು ಸ್ವಲ್ಪವೂ ಇಷ್ಟವಿಲ್ಲ. ನನ್ನ ಮಿಸೆಸ್‌ಗೆ ನನಗಿಂತಲೂ ಮೊದಲೇ ಇಷ್ಟವಿಲ್ಲದ ಸ್ವಭಾವದವಳು. ಪ್ರತಿಯೊಂದು ನಿಮಿಷವೂ ನಮಗೆ ಅಮೂಲ್ಯವಾದದ್ದು. ಆದಕ್ಕೆ ನಾನು ಜಾಲಿಯಾಗಿ ವಿಹಾರಾರ್ಥವಾಗಿ ಹೊರಟಿದ್ದೇವೆ. ನಮ್ಮನ್ನು ಕುರಿತು ಸಂಕ್ಷೇಪವಾಗಿ ಹೇಳಬೇಕೆಂದರೆ. ಸಮಯ ಬಹಳ ಹಿಡಿಯಬಹುದು."

—ಎನ್ನುತ್ತಾ ಪತ್ನಿಯ ಕಡೆ ತಿರುಗಿದ ಆ ಯುವಕ.

ಆವಳು ಮೋಹಕವಾಗಿ ನಗೆ ಬೀರಿದಳು.

"ಡಾರ್ಲಿಂಗ್ ವಿಷಯಗಳೆಲ್ಲವನ್ನು ಸಂಕ್ಷೇಪವಾಗಿ ನನಗಿಂತಲೂ ನೀನು ಚೆನ್ನಾಗಿ ವಿವರಿಸಿ ಹೇಳಬಲ್ಲೆ."

—ಎನ್ನುತ್ತಾ ಅವಳ ಕೈ ಹಿಡಿದುಕೊಂಡು ಹಿಸುಕುತ್ತಾ ಹೇಳುವಂತೆ ವುಸಲಾಯಿಸಿದ ಆ ಯುವಕ ಡೇವಿಡ್.

ಆ ಸುಂದರಿ ಕೋ ಕೋ ಕೋಲಾ ಬಾಟಲ್ ಬರಿದು ಮಾಡಿ ಮೇಜಿನ ಮೇಲಿಟ್ಟಳು. ಸಿಗರೇಟು ಬೇಕೆಂದು ಟೇಬಲಿನ ಮುಂದಕ್ಕೆ ಬಗ್ಗಿ ಮೊಣಕೈಗಳು ಮೇಜಿನ ಮೇಲೆ ಊರಿದಳು.

ಮಿಸ್ಟರ್ ಡೇವಿಡ್ ಅವಳ ತುಟಿಗಳಿಗೆ ಒಂದು ಸಿಗರೇಟನ್ನು ಆಫರ್ ಮಾಡಿದನು.

"ಥ್ಯಾಂಕ್ಸ್ ಡಾರ್ಲಿಂಗ್"

—ಎಂದಳು ಕಿರುನಗೆ ಬೀರುತಾ.

ಕರುಣಾಕರನ್ ಇದೇ ಸಮಯವೆಂದುಕೊಂಡು ಲೈಟರ್ ಬೆಳಗಿಸಿ 'ಆಫರ್, ಮಾಡಿದ.

ಅವಳು ಮುಂದಕ್ಕೆ ಬಗ್ಗಬೇಕಾಯಿತು. ಆ ಸಮಯದಲ್ಲಿ ಅವಳ ಗುಂಡ ನೆಯ ಸ್ಥನಗಳು ಅರ್ಧ ಚಂದ್ರಾಕಾರವಾಗಿ ಕಂಡವು. ಆ ಸ್ಥನಗಳ ತುಂಬು ಸೌಂದರ್ಯ ಕರುಣಾಕರನ ಕಣ್ಣಿಗೆ ಹಬ್ಬವನ್ನುಂಟು ಮಾಡಿದವು.

ಹರ್ಷದಿಂದ ಕಣ್ಣು ರೆಪ್ಪೆ ಬಡಿದಳಾಕೆ.

ಅವಳು ತನ್ನ ಸಂಭಾಷಣೆ ಪ್ರಾರಂಭಿಸಿದಳು.

"ನಮ್ಮ ಡೇಟಿಂಗ್ ಆರು ತಿಂಗಳ ಹಿಂದೆಯೇ ಪ್ರಾರಂಭವಾಯಿತು. ಹಾಂಕಾಂಗ್‌ನಿಂದ ವಿಕ್ಟೋರಿಯಾಗೆ ಬಂದ ನಾನು ಮಿಸ್ಟರ್ ಡೇವಿಡ್‌ನ ಆಕ ರ್ಷಣೆಗೆ ಸಿಲುಕಿಕೊಂಡು ಕೆಲದಿನಗಳಲ್ಲಿ ಪರಸ್ಪರ ಪರಿಚಯ ಮಾಡಿಕೊಂಡವು ಜೊತೆಗೂಡಿದೆವು. ನಮ್ಮಿಬ್ಬರ ಅಭಿಪ್ರಾಯ ಒಂದೇ ಆಗಿದ್ದವು. ಹಾಬೀಗಳೂ ಸಹ ಒಂದೇ....ಪರಸ್ಪರ ಒಬ್ಬರನ್ನು ಒಬ್ಬರು ಚೆನ್ನಾಗಿ ಅರ್ಥ ಮಾಡಿಕೊಂಡೆವು. ಸಂತೃಪ್ತಿಯಿಂದ ಹೃದಯ ಅರ್ಪಿಸಿಕೊಂಡೆವು. ಆನಂದ ಸಾಗರದಲ್ಲಿ ತೇಲಾ ಡುತ್ತಾ ಪ್ರಪಂಚ ಯಾತ್ರೆಗೆ ಇಬ್ಬರೂ ಹೊರಟೆವು. ಮನೆಯಂತೆಯೇ ಇರುವ ಒಂದು ವ್ಯಾನ್ ಮಾಡಿಕೊಂಡು ಹೊರಟೆವು."

"ಫಕ್ತೂನಿಸ್ತಾನ್, ಇಸ್ಲಾಮಾಬಾದ್, ನೇಪಾಳ ತಿರುಗಿದೆವು. ಚೈನಾ ಭಾರತದ ಬಾರ್ಡರ್‌ನಲ್ಲಿ ಆಕಸ್ಮಿಕವಾಗಿ ನಮ್ಮ ವ್ಯಾನ್ ಅಗ್ನಿದೇವನಿಗೆ ಆಹು ತಿಯಾಯಿತು. ನಮ್ಮ ಅದೃಷ್ಟ ಬಲವಾಗಿದ್ದರಿಂದ ನಾವು ಜೀವಂತವಾಗಿ ಆಪ ತ್ತಿನಿಂದ ಪಾರಾದೆವು. ಪ್ಲೇನಿನಲ್ಲಿ ಬೆಂಗಳೂರಿಗೆ ಬಂದೆವು. ಇಲ್ಲಿ ವ್ಯಾನ್‌ನಲ್ಲಿ ಪ್ರಯಾಣ ಮಾಡಬೇಕೆಂದು ಆಸೆ ಉದ್ಭವಿಸಿತು. ವಿಜಾಪುರದಲ್ಲಿ ಅಂತರಾ ಷ್ಟ್ರೀಯ ಉತ್ಸವ ನಡೆಯುತ್ತದೆ. ಅಲ್ಲಿಗೆ ಹೋಗಬೇಕೆಂದು ನಮ್ಮ ಸಂಕಲ್ಪ. ವ್ಯಾನ್‌ನಲ್ಲಿ ಮನೆಯಿದ್ದಂತೆಯೇ ಇರಬೇಕು. ಆ ಸೌಕರ್ಯ ಪಡೆದಾಗಲೇ ನಾವು ಸುಖವಾಗಿ ಯಾತ್ರೆ ಮಾಡಿದಂತಾಗುವುದು."

"ಒಂದು ಮಾತಿನಲ್ಲಿ ಹೇಳಬೇಕೆಂದರೆ ನಮ್ಮದು ಹನಿಮೂನ್ ಟ್ರಿಪ್ ನಮ್ಮ ಆನಂದಕ್ಕೆ ಆಂತಕಗಳಿಲ್ಲದೆ ಸುಖವಾಗಿರುವ ಹಾಗೆ ನಮಗೆ ತಕ್ಕ ವ್ಯಾನ್ ನೀವು ಕೊಡಬೇಕು. ವಿದೇಶಗಳಿಂದ ಬರುವ ಹೊಸ ಜೋಡಿ ಸಂಸಾರಗಳನ್ನು ನೀವು ನೋಡಿಯೇ ಇರಬಹುದು. ಅವರಿಗೆ ಎಂತಹ ಸೌಕರ್ಯ ಬೇಕಿರುತ್ತಾ ದೆಂದು ಸಾಮಾನ್ಯವಾಗಿ ತಿಳಿದೇ ಇರುತ್ತದೆ. ಈಗ ನಮಗೊಂದು ವ್ಯಾನ್ ಬೇಕಾಗಿದೆ. ನೀವು ಕೂಡಲೇ ನಮಗೆ ಏರ್ಪಾಡು ಮಾಡಬೇಕು

ಪಟ್ಸಾಲ್."

—ಎಂದು ಹೇಳಿ ಮುಗಿಸಿದಳು.

ಆ ಸೌಂದರ್ಯದ ಪುತ್ಥಳಿಯೊಪ ಮಿಸೆಸ್ ಡೇವಿಡ್. ಅವಳ ನಗೆ ಟೂ ಸಹ ಮುಗಿಯಿತು.

"ಥಾಂಕ್ಯೂ ಡಾರ್ಲಿಂಗ್"

—ಎನ್ನುತ್ತಾ ನಗೆ ಬೀರಿದ ಡೇವಿಡ್.

ಮಿಸ್ಟರ್ ಕರುಣಾಕರನ್ ಎದ್ದು ನಿಂತ.

"ನಾನು ಇರುವವರೆವಿಗೂ ಎಷ್ಟೋ ಕಷ್ಟಸುಖಗಳನ್ನು ನೋಡಿದ್ದೇನೆ. ಆದರೆ, ನಿಮ್ಮಂತೆ ಮುದ್ದಾದ ಮೂರು ಮಾತುಗಳಲ್ಲಿ ನೈಜ ವಿಷಯಗಳನ್ನು ಸಂಪೂರ್ಣವಾಗಿ ವ್ಯಕ್ತ ಪಡಿಸಿದವರನ್ನು ಬೇರೆ ಯಾರನ್ನೂ ನೋಡಲಿಲ್ಲ. ಟೈಮ್ ವೇಸ್ಟ್ ಮಾಡುವುದು ನನಗೂ ಇಷ್ಟವಿಲ್ಲ. ನಡೆಯಿರಿ ಹೋ-ಗೋಣ. ನಮ್ಮ ಬಳಿ ಟೆಂಪೋಗಳಿಂದ ಹಿಡಿದು ದೊಡ್ಡ ಟ್ರಕ್‌ಗಳವರೆವಿಗೂ ಅನೇಕ ಬಗೆಯವು ಇವೆ. ನೀವು ಅಪೇಕ್ಷಿಸುವಂಥ ವ್ಯಾನು ಹತ್ತು-ಹನ್ನೆರಡರ ಮೇಲಿವೆ. ಚೆನ್ನಾಗಿ ಪರೀಕ್ಷಿಸಿ ನೋಡಿ ನಿಮಗೆ ಬೇಕಾದುದ್ದನ್ನು ಆರಿಸಿ ಕೊಳ್ಳಿ."

—ಎನ್ನುತ್ತಾ ಹೊರಗೆ ಬಂದನು.

ಸುಮಾರು ನೂರು ಗಜಗಳು ನಡೆದರು. ಆ ಕಡೆ ಈ ಕಡೆ ವಿವಿಧ ವಾಹನಗಳು ಸಾಲಾಗಿ ನಿಂತಿದ್ದವು. ಅವುಗಳಲ್ಲಿ ಕುಂಟಾಗಿರುವವೂ ಇದ್ದವು ಉರುಡಾಗಿರುವವೂ ಸಹ ಇದ್ದವು.

ಕೆಲಸ ಮಾಡುವವರೆಲ್ಲಾ ಒಂದು ಕಡೆ ಕೆಲಸ ಮಾಡುತ್ತಾ ಮತ್ತೊಂದು ಕಡೆ ಓರೆ ನೋಟದಿಂದ ಆ ಸೌಂದರ್ಯರಾಶಿಯಾದ ಹೆಣ್ಣನ್ನು ನೋಡುತ್ತಿದ್ದರು.

ದಾರಿಯ ಉದ್ದಕ್ಕೂ ಆ ಹೆಣ್ಣಿಗೆ ಏನೇನೋ ವಿವರಿಸುತ್ತಾ ನಡೆಯುತ್ತಿದ್ದನು ಕರುಣಾಕರನ್.

ಅವಳು ಅವಶ್ಯವಿರಲಿ ಇಲ್ಲದಿರಲಿ ಮೋಹಕವಾಗಿ, ಮುದ್ದಾಗಿ ನಗುತ್ತಿದ್ದಳು. ಒಂದು ವಿಧವಾಗಿ ಹೇಳಬೇಕಾದರೆ ಕರುಣಾಕರನ ಹೃದಯವನ್ನೆ ಕಲಕಿಬಿಟ್ಟಿದ್ದಳು.

ಒಂದು ಕಡೆ ಸಾಲಾಗಿ ಹನ್ನೆರಡು ವ್ಯಾನುಗಳು ನಿಂತಿದ್ದವು. ಅವುಗಳು

ನೋಡಲು ಸಾಮಾನ್ಯವಾಗಿ ಪೋಲೀಸ್ ವ್ಯಾನುಗಳಂತಿದ್ದವು.

ಒಂದೊಂದು ವ್ಯಾನನ್ನೇ ತೋರಿಸುತ್ತಾ ಅದರ ಇತಿಹಾಸವನ್ನೆಲ್ಲಾ ಹೇಳ ತೊಡಗಿದ ಕರುಣಾಕರನ್.

ಕೊನೆಯಲ್ಲಿ ನಿಂತಿದ್ದ ವ್ಯಾನನ್ನು ತೋರಿಸಿ ಹೇಳಿದ.

"ಇದು ನಿಮಗೆ ಚೆನ್ನಾಗಿರುತ್ತದೆಂದೇ ನನ್ನ ಭಾವನೆ. ಸೆಕೆಂಡ್ ಹ್ಯಾಂಡೆಂದು ಹೆಸರೇ ಹೊರತು, ಇದರ ಓನರ್ ಇದನ್ನು ಕೊಂಡು ಒಂದು ತಿಂಗಳು ಸಹ ಆಗಲಿಲ್ಲ. ಇನ್ನೂ ಪೆಯಿಂಟ್ ಸಹ ಸರಿಯಾಗಿ ಆರಿಲ್ಲ. ಇದನ್ನು ನೀವು ಹೊಸದೆಂದೇ ಭಾವಿಸಬಹುದು."

ಮಿಸೆಸ್ ಡೇವಿಡ್ ಮತ್ತೊಂದು ಸಿಗರೇಟು ಬೆಳಗಿಸಿ ಆ ವ್ಯಾನನ್ನು ಪರೀಕ್ಷಿಸಿದಳು.

ಪತಿಯ ಕಿವಿಯಲ್ಲಿ ಏನೇನೋ ಗುಸಗುಸನೇ ಮಾತನಾಡಿದಳು.

ಕರುಣಾಕರನ್ ಅವರಿಬ್ಬರ ಹಾವ ಭಾವಗಳನ್ನು ಗಮನಿಸಿದನು.

ಅದು ಅವರಿಗೆ ಒಪ್ಪಿಗೆಯಾಗಿದೆಯೆಂದು ತಿಳಿದುಕೊಂಡನು.

ಮಿಸ್ಟರ್ ಡೇವಿಡ್ ನಗುತ್ತಾ ಕರುಣಾಕರನ ಬಳಿಗೆ ಬಂದನು.

"ನಮಗೆ ಈ ವ್ಯಾನು ಒಪ್ಪಿಗೆಯಾಗಿದೆ. ಇದರ ಬೆಲೆ ಎಷ್ಟೆಂಬುದು ಹೇಳುತ್ತೀರಾ?" ಎಂದು ಕೇಳಿದನು.

"ನಿಮಗೆ ಒಪ್ಪಿಗೆಯಾಗಿದೆಯಲ್ಲಾ ಎಂದು ಸಿಕ್ಕಾಪಟ್ಟೆ ಬೆಲೆ ಹೇಳುವ ಅವಕಾಶವಾದಿಯಲ್ಲ ನಾನು ನಮ್ಮದೆಲ್ಲಾ ಫಿಕ್ಸೆಡ್ ರೇಟ್ಸ್. ಇದನ್ನು ನಾನು ಇಪ್ಪತ್ತೈದು ಸಾವಿರಗಳಿಗೆ ಕೊಂಡಿದ್ದೇನೆ. ಜೊತೆಗೆ ಮೂರುಸಾವಿರ ತೇರಿಸಿ ಕೊಂಡು ನಿಮಗೆ ಕೊಡಲು ನನ್ನ ಅಭ್ಯಂತರವೇನೂ ಇಲ್ಲ. ಇದು ನಿಮಗೂ ನನಗೂ ನ್ಯಾಯವಾದ ವ್ಯವಹಾರವೆಂದು ನನ್ನ ಭಾವನೆ

—ಎಂದು ಹೇಳಿದ ಕರುಣಾಕರನ್.

ಆ ಯುವಕನಲ್ಲಿ ಉತ್ಸಾಹ ಕುಗ್ಗಿತು. ಅವನಿಗೆ ಆ ಬೆಲೆ ಅಧಿಕವೆನ್ನಿಸಿತು ಕೂಡಲೇ ಹೇಳಿದ.

"ಅನಾವಶ್ಯವಾದ ವ್ಯಾಪಾರ ಯಾರಿಗೂ ಕೆಲಸಕ್ಕೆ ಬರುವುದಿಲ್ಲ. ಇಪ್ಪತ್ತು ಸಾವಿರಕ್ಕೆ ತೆಗೆದುಕೊಳ್ಳುತ್ತೇವೆ. ಅಷ್ಟಕ್ಕೆ ಮಾರಿ ನೀವು ಕೇಳಿದರೆ ನಮ್ಮಿಂದ ಕೊಡಲು ಸಾಧ್ಯವಿಲ್ಲ"

ಕರುಣಾಕರನ್ ನಗೆ ಬೀರಿದ.

"ಅಸಲಿಗೇ ಐದು ಸಾವಿರಗಳು ನಷ್ಟ ಮಾಡಿಕೊಳ್ಳುವುದು ನನಗೇ ಇಲ್ಲ; ವ್ಯಾಪಾರಸ್ಥನಿಗೇ ಇಷ್ಟವಿರುವುದಿಲ್ಲ. ಆದುದರಿಂದ ಇದು ಮಾರಾಟದಲ್ಲಿ ನಡೆಯುವ ಪದ್ಧತಿಯಲ್ಲ. ಸಾರಿ ನೀವು ಬೇರೊಂದು. ಕಡೆ ಹುಡಿಕಿಕೊಳ್ಳ ಬಹುದು."

—ಎಂದು ತಾನೂ ಖಚಿತವಾಗಿಯೇ ಹೇಳಿದ.

ಇಬ್ಬರ ಕಡೆಯೂ ನೋಡಿದ ಆ ಹೆಣ್ಣು—

"ಮಿಸ್ಟರ್ ಕರುಣಾಕರನ್ ನೀವು ಸ್ವಲ್ಪ ಈ ಕಡೆ ಬರುವಿರಾ?"

—ಎಂದು ಹತ್ತು ಗಜದೂರ ನಡೆದಳು.

ಕರುಣಾಕರನ್ ಅವಳನ್ನು ಸಮೀಪಿಸಿನು.

ಸ್ವಲ್ಪ ಕಾಲ ಗುಸಗುಸನೆ ಅವನಿಗೇ ಏನೋ ಹೇಳಿದಳು.

ಅವರಿಬ್ಬರೂ ಮತ್ತಷ್ಟು ಸಮೀಪವಾಗಿ ನಿಂತಿದ್ದನ್ನು, ಅವಳು ಕರುಣಾ ಕರನನ್ನು ಮೋಹಕವಾಗಿ ಓರೆನೋಟದಿಂದ ನೋಡುತ್ತಿದ್ದುದನ್ನು ಅವನು ಅವಳನ್ನು ತಾಕುತ್ತಾ ಕೈ ಹಿಡಿದುಕೊಂಡು ಹಿಸುಗುತ್ತಿದ್ದುದನ್ನು ಗಮನಿಸಿದ ಮಿಸ್ಟರ್ ಡೇವಿಡ್.

ಅವರಿಬ್ಬರ ವರ್ತನೆಗಳನ್ನು ಸೈರಿಸಲಾರದವನಾದನು. ನೋಡಿಯೂ ನೋಡದವನಂತೆ ಬೇರೊಂದು ಕಡೆಗೆ ಮುಖ ತಿರುಗಿಸಿದನು.

ಗುಸು ಗುಸು ಮಾತು ಮುಗಿದವು. ಇಬ್ಬರೂ ದೂರ ಸರಿದು ಡೇವಿ ಡ್‌ನ ಬಳಿಗೆ ಬಂದರು.

"ನಾನು ವ್ಯಾನನ್ನು ನಷ್ಟಕ್ಕೇ ಕೊಡಲು ಸಿದ್ಧನಿದ್ದೇನೆ ಮಿಸ್ಟರ್ ಡೇವಿಡ್ ನಿಮ್ಮ ಮಿಸೆಸ್ ನನಗೆ ಎಲ್ಲಾ ವಿಷಯ ತಿಳಿಸಿದಳು. ನಿಮ್ಮ ದಂಪತಿಗಳ ಅನ್ಯೋನ್ಯತೆ ನನ್ನ ಮನಸ್ಸಿಗೆ ಬಹಳವಾಗಿ ಹಿಡಿಸಿತು. ನಿಮ್ಮ ಹನಿಮೂನ್ ಟ್ರಿಪ್ ಸಂತೋಷದಾಯಕವಾಗಬೇಕೆಂದು ನನ್ನ ಕೋರಿಕೆ. ಆದುದರಿಂದಲೇ ಈ ವ್ಯಾನನ್ನು ಇಪ್ಪತ್ತು ಸಾವಿರಗಳಿಗೇ ಕೊಡುತ್ತಿದ್ದೇನೆ. ನಮ್ಮ ಟೈಪಿಸ್ಟ್ ಕೆಲ ಕ್ಷಣಗಳಲ್ಲಿಯೇ ಕಾಗದ ಸಿದ್ಧಪಡಿಸುತ್ತಾಳೆ. ಅಷ್ಟದರಲ್ಲಿ ನಮ್ಮ ಹಣದ ವ್ಯವಹಾರವೆಲ್ಲಾ ಮುಗಿಸಿಕೊಳ್ಳಬಹುದು. ಬೈ ದಿ ಬೈ ನೀವು ಈ ರಾತ್ರಿಯೇ ಅದರಲ್ಲಿ ನಿಮ್ಮ ಸಂಸಾರ ಸುಗಮವಾಗಿ ನಡೆಸಬಹುದು."

—ಎಂದು ಹೇಳುತ್ತಾ ಕರುಣಾಕರನ್ ಆ ಸುಂದರಿಯ ಕಡೆ ನೋಡಿದನು.

ಅವಳು ಮೋಹಕವಾಗಿ ನಗೆ ಬೀರಿದಳು.

ಮಿಸ್ಟರ್ ಡೇವಿಡನ ಶರೀರ ಬಿಸಿಯೇರಿತು.

ಅವಳ ಕಡೆಗೆ ತೀಕ್ಷ್ಣವಾಗಿ ನೋಡಿದನು.

ಎಲ್ಲರೂ ಆಫೀಸಿನ ಕಡೆ ನಡೆದರು.

ಅರ್ಧಗಂಟೆಯಲ್ಲಿ ಎಲ್ಲಾ ಕೆಲಸಗಳೂ ಪೂರ್ಣಗೊಂಡವು. ವ್ಯಾನು ಅವರ ಸ್ವಾಧೀನವಾಯಿತು.

ಮಿಸೆಸ್ ಡೇವಿಡ್ ಕರುಣಾಕರನಿಗೆ 'ಟಾ ಟಾ' ಮಾಡಿದಳು.

ಮಿಸ್ಟರ್ ಡೇವಿಡ್ ಡ್ರೈವಿಂಗ್ ಸೀಟಿನಲ್ಲಿ ಕುಳಿತುಕೊಂಡನು. ಅವನ ಪಕ್ಕದಲ್ಲಿ ಆ ಸುಂದರಿ ಕುಳಿತಳು.

ವ್ಯಾನು 'ಸರೋಜಾ ಆಟೋ ಕ್ಲಿನಿಕ್' ಮೈನ್ ಗೇಟಿನಿಂದ ಹೊರಕ್ಕೆ ಬಂತು.

ಮಿಸ್ಟರ್ ಡೇವಿಡ್ ವೇಷದಲ್ಲಿದ್ದ ಸುಂದರ ಅವಳ ಮುಖವನ್ನು ನೋಡಿ ಕಿರುನಗೆ ಬೀರಿದ. ಅವನ ಶ್ರೀಮತಿಯಾಗಿದ್ದ ಚಂಚಲಾದೇವಿ ನಗುತ್ತಾ ಅವನ ಪಕಕ್ಕೆ ಸರಿದು ಕುಳಿತುಕೊಂಡಳು.

ಅವನು ತನ್ನ ಎಡಗೈಯನ್ನು ಅವಳ ಸೊಂಟದ ಸುತ್ತಲೂ ಬಳಸಿ ತನ್ನೆಡೆಗೆ ಎಳೆದುಕೊಂಡನು.

ಅವಳು ಪರವಶಳಾಗಿ ಅವನ ಭುಜದಮೇಲೆ ಒರಗಿದಳು.

ವ್ಯಾನು ಫರೀದನ ಶೆಡ್ ಕಡೆಗೆ ವೇಗವಾಗಿ ಸಾಗುತ್ತಿತ್ತು.

# ಹನ್ನೊಂದು

"ಆಹಾ ಈ ವೇಷದಲ್ಲಿ ನೀನು ಅದೆಷ್ಟು ಸುಂದರವಾಗಿ ಕಾಣುತ್ತಿರುವೆ ಯೆಂಬುದು ಗೊತ್ತೇ?"

—ಎನ್ನುತ್ತಾ ರಜನಿಯ ಕೆನ್ನೆಯನ್ನು ಜಿಗುಟಿದ ಸತ್ತೇದಾರ ರವಿಕಾಂತ

ಕೆನ್ನೆಗೆ ಮೆತ್ತಿಕೊಂಡ ಸೋಪಿನ ನೊರೆಯನ್ನು ಒರೆಸಿಕೊಳ್ಳುತ್ತಾ—

"ನಿಮ್ಮ ಈ ಲಲ್ಲೆ ಮಾತು ನಿಲಿಸಿ, ಮೊದಲು ಸ್ನಾನ ಮಾಡಿ ಮುಗಿಸಿ"

—ಎಂದಳು ಮುದ್ದಾಗಿ ಸಿಡಿಮಿಡಿಗೊಂಡು ರಜನಿ.

"ಈ ದಿನ ರವೀಂದ್ರ ಕಲಾಕ್ಷೇತ್ರದಲ್ಲಿ ಹೇಮಾ ಮಾಲಿನಿಯ ನೃತ್ಯವಿದೆ. ಹೋಗೋಣ ಸ್ವೀಟಿ."

ಹೇಳಿದ ರವಿಕಾಂತ.

"ಓ....ಹಾಗಾದರೆ ಈ ದಿನ ನಾವು ಡ್ಯಾನ್ಸ್‌ಗೆ ಹೋದರೆ ಯಾವನೋನಾದರೂ ಒಬ್ಬ ನಾಯಕ ಖಂಡಿತವಾಗಿಯೂ ನೆಗೆದು ಬೀಳುತ್ತಾನೆ"

—ಎನ್ನುತ್ತಾ ರವಿಕಾಂತನ ಬೆನ್ನು ಉಜ್ಜತೊಡಗಿದಳು ರಂಜನಿ.

"ಏಕೆ? ನಾನು ಹೇಳುವ ಮಾತುಗಳು ನಿನಗೆ ತಮಾಷೆಯಾಗಿ ತೋರುತ್ತಿವೆಯೇ?"

—ಎಂದು ಅವಳ ಕಡೆಗೆ ಆಸೆಯಿಂದ ನೋಡುತ್ತಾ ಕೇಳಿದನು.

"ಇಲ್ಲ ಅಂತಹುದೇನೂ ಇಲ್ಲ"

"ಹಾಗಾದರೆ ನಿನ್ನ ಮಾತಿನ ಉದ್ದೇಶ?"

"ವಚನ ನೀಡುವುದಕ್ಕೂ ಒಂದು ಮಿತಿಯಿರಬೇಕು. ಇದೇ ರೀತಿ ಅದೆಷ್ಟು ಸಾರಿ....?"

"ಅಂದರೆ ನಾವು ಡ್ಯಾನ್ಸ್ ನೋಡಲು ಹೊರಟರೂ ನಮಗೆ ಅಲ್ಲಿ ಲಭಿಸುವ ಲಾಭವೇನೂ ಇಲ್ಲ. ಯಾವನಾದರೂ ಒಬ್ಬ ಕುಚೇಲ ಅವಲಕ್ಕಿ ಗಂಟು ಹಿಡಿದುಕೊಂಡು ನಿಮ್ಮ ಕಣ್ಣಿಗೆ ಕಾಣಿಸುತ್ತಾನೆ. ನೀವು ನಿಮ್ಮ ಉತ್ತರೀಯವೂ ಸಹ ಜಾರಿ ಬೀಳುವುದು ನೋಡಿಕೊಳ್ಳದೇ ಆಪದ್ಬಾಂದವನಂತೆ ಅವನ ಮುಂದೆ ಪ್ರತ್ಯಕ್ಷರಾಗಿರುವಿರಿ."

"ನೀನೇ ಈ ರೀತಿ ಹೇಳಿದರೆ ಹೇಗೆ ಡಾರ್ಲಿಂಗ್?"

"ಅದಕ್ಕಿಂತಲೂ ಮನೆಯಲ್ಲಿಯೇ ಕುಳಿತು ಆಟ ಆಡುತ್ತಾ ಕುಳಿತುಕೊಳ್ಳುವುದೇ ಬೆಟರ್."

"ಆಗ ಮಾತ್ರ ಯಾವ ಆಂತಕಗಳೂ ನಮಗೆ ಬರುವುದಿಲ್ಲವೆಂದು ಯಾವ ಗ್ಯಾರಂಟಿಯ ಮೇಲೆ ಹೇಳುವೆ?"

"ಅದೆಷ್ಟರ ಕೆಲಸ. ಹೇಗಿದ್ದರೂ ಅದು ನಮ್ಮ ಕೈಯಲ್ಲಿರುವ ಕೆಲಸ. ಒಂದು ದಿನ ಮಾತ್ರ ನೀವು ನನಗೆ ಪರ್ಮಿಷನ್ ಕೊಡಿ. ನೀವು ಹೊರಗೆ ಹೋಗದಂತೆ ಕಟ್ಟುನಿಟ್ಟು ಮಾಡುವ ಜವಾಬ್ದಾರಿ ನನ್ನದು".

ರಜನಿ ಅಂತಹ ಸಾಹಸಿತಕಳೆಂಬುದು ಪತ್ತೇದಾರ ರವಿಕಾಂತನಿಗೆ ಚೆನ್ನಾಗಿ ತಿಳಿದಿತ್ತು.

"ಕೇವಲ ಒಂದೇ ದಿನ ಸಾಕೇ?"

—ಎಂದು ಕೇಳಿದ.

ಅವಳು ಬೆನ್ನು ಉಜ್ಜುವುದನ್ನು ನಿಲ್ಲಿಸಿ, ಬಿಸಿನೀರು ಒಂದು ಚೊಂಬು ಅವನ ಮೇಲೆ ಸುರಿದಳು.

"ನಿನಗೆ ಅಷ್ಟು ಅಧಿಕಾರ ಕೊಟ್ಟಿರುವುದರಿಂದಲೇ ಕೊನೆಗೆ ಈ ಬಾತ್ ರೂಮಿನಲ್ಲಿಯೂ ಸಹ ನನ್ನಮೇಲೆ ಅಧಿಕಾರ ಚಲಾಯಿಸುತ್ತಿರುವೆ."

—ಎಂದು ಕೃತಕ ಸಿಡುಕಿನಿಂದ ನುಡಿದ ರವಿಕಾಂತ.

"ಸಮ ಧರ್ಮಚಾರಿಣಿಯಾಗಿ ಸರ್ವ ವೇಳೆಯಲ್ಲಿಯೂ ಪತಿದೇವನ ಬಳಿಯೇ ನನ್ನ ಕೆಲಸ. ನಮ್ಮ ಮಾತುಗಳಿಗೆ ಕೊನೆ ಮೊದಲೇ ಇರುವುದಿಲ್ಲ.

ನನ್ನ ವಾಚ್‌ಮನ್‌ನಿಗೆ ಹೇಳಿ ಯಾರೂ ಒಳಗೆ ಪ್ರವೇಶಿಸದಂತೆ ಮಾಡುತ್ತೇನೆ. ನಾವು ಆನಂದದಿಂದ ಕಾಲಕಳೆಯಲು ಬೇರೆಮಾರ್ಗವೇನಿದೆ ಹೇಳಿ?"

—ಎಂದು ಕೇಳಿದಳು ರಜನಿ.

ರವಿಕಾಂತ ನಾಲ್ಕು ಚೊಂಬು ನೀರು ಸರ ಸರನೇ ರಜನಿಯ ಕೈಯಿಂದ ತಲೆಯ ಮೇಲೆ ಸುರಿಸಿಕೊಂಡು ಸ್ನಾನ ಮುಗಿಸಿದ.

ಟವೆಲ್ ತಂದುಕೊಟ್ಟಳು ರಜನಿ. ಒರೆಸೆಂಬಂತೆ ಸಂಜ್ಞೆ ಮಾಡಿದನು.

"ಪಾಪ. ಕೈಲಾಗದ ಎಳೆ ಮಗುವೆನ್ನಾ ಎಂದುಕೊಂಡು ಬೆನ್ನುಜ್ಜಲು ಬಂದರೆ, ನಿಮ್ಮ ಶರೀರದ ಕೋರಿಕೆಗಳಿಗೆ ಮಿತಿಯೇ ಬೇಡವೆ? ಈ ಪ್ರಪಂಚದಲ್ಲಿ ಎಂತಹ ತಪ್ಪು ಮಾಡಿದ ಸ್ತ್ರೀಯನ್ನಾದರೂ ನಂಬಬಹುದು. ಈ ಗಂಡಸರನ್ನು ಮಾತ್ರ ನಂಬಲು ಸಾಧ್ಯವೇ ಇಲ್ಲ."

—ಎಂದು ಹೇಳುತ್ತಾ ಟವಲಿನಿಂದ ರವಿಕಾಂತನ ಶರೀರವನ್ನು ಒರೆಸತೊಡಗಿದಳು ರಜನಿ.

ರವಿಕಾಂತನಿಗೆ ಕಚಗುಳಿಯಿಟ್ಟಂತಾಯಿತು.

"ಅದೆಷ್ಟು ಜನ್ಮಗಳ ಕರ್ಮ ಫಲವೋ ನಿನ್ನನ್ನು ನನ್ನ ಪತ್ನಿಯನ್ನಾಗಿ ಮಾಡಿಕೊಂಡೆ ರಜನಿ ನಿನ್ನಂತಹ ಸುರಸುಂದರಿಯಾದ ಪತ್ನಿ ನನಗೆ ಲಭಿಸಿದ್ದು ಮಹಾಭಾಗ್ಯ"

—ಎನ್ನುತ್ತಾ ಅವಳನ್ನು ಆಲಂಗಿಸಿಕೊಂಡನು.

ಅವನ ಬಿಸಿಯ ಉಸಿರು ಅವಳ ತಣ್ಣನೆಯ ಕಪೋಲಗಳಿಗೆ ತಾಕಿತು.

ಅವಳ ತನ್ನ ಮುಖ ಪಕಕ್ಕೆ ತಿರುಗಿಸಿಕೊಂಡಳು.

"ಸಾಕು ನಿಮ್ಮ ಸರಸ. ಒಳಗೆ ನಡೆಯಿರಿ. ಹಗಲಿನಲ್ಲಿಯೇ ನನ್ನ ಪ್ರಾಣ ಹಿಂಡುವಿರಿ"

—ಎಂದಳು ಕೋಪ ನಟಿಸುತ್ತಾ.

"ರಾತ್ರಿಯ ವ್ಯವಹಾರ ಗ್ಯಾರಂಟಿಯಿರುವುದಿಲ್ಲ. ಆದುದರಿಂದ ಹಗಲಿನಲ್ಲಿಯೇ ಪಾತ್ರ ರೂಪಾದರೂ ಪಡವಾಗಿಲ್ಲವೆಂದು ಮಧುರಾನಂದ ಹೀರಿಕೊಳ್ಳಲು ತವಕಿಸುತ್ತಿದ್ದೇನೆ'

—ಎಂದು ಬಾಹುಬಂಧನ ಮತ್ತಷ್ಟು ಬಿಗಿಗೊಳಿಸಿದ.

ಉಪಾಯದಿಂದ ಅವನ ಬಂಧನದಿಂದ ವಿಮುಕ್ತಳಾಗಿ ಮನೆಯೊಳಕ್ಕೆ ಓಡಿ

ದಳು ರಜನಿ.

ರವಿಕಾಂತ ಅವಳನ್ನು ಹಿಂಬಾಲಿಸಿದ.

"ಗೋವಿನ ಹಿಂದೆ ಗೂಳಿಯಂತೆ ನೀವು ಈ ರೀತಿ ನನ್ನ ಹಿಂದೆ ಬೀಳುವುದು ಸರಿಯಲ್ಲ. ಇದು ಸಂಸಾರಸ್ಥರ ಲಕ್ಷಣವೇ ಅಲ್ಲ"

"ಸಂಸಾರಿಯಾಗಿರುವುದಕ್ಕಿಂತಲೂ ಗೂಳಿಯಾಗಿದ್ದರೇನೇ ಬಹಳ ಉತ್ತಮವಾಗಿತ್ತೇನೋ?"

ಎನ್ನುತ್ತಾ ಅವಳ ಮೋಹಕ ಮುಖದ ಕಡೆ ನೋಡಿ ಕಣ್ಣು ಮಿಟುಕಿಸಿದನು.

"ನಿಮ್ಮ ಸರಸ ಶೃಂಗಾರ ಮಾತುಗಳನ್ನು ಸಾಕುಮಾಡಿ. ಈ ಗಂಡಸರಿಗೆ ಕೆಲಸವಿಲ್ಲದೆ ಮನೆಯಲ್ಲಿಯೇ ಕುಳಿತರೆ ಇದೇ ರಾದ್ಧಾಂತ"

"ಕೊನೆಗೂ ಹೆಂಗಸರ ಬುದ್ಧಿಯನ್ನೇ ತೋರಿಸಿದೆ ಗಂಡ ಮನೆಯಲ್ಲಿದ್ದರೆ ಒಂದು ಗೋಳು. ಹೊರಕ್ಕೆ ಹೋದರೆ ಮತ್ತೊಂದು ಗೋಳು. ಏನು ಮಾಡುವುದು? ಅವೆಲ್ಲಾ ನಮ್ಮ ಗಂಡಸರ ಕರ್ಮ."

—ಎಂದು ನಗುತ್ತಾ ಹೇಳಿದ ರವಿಕಾಂತ.

"ಅದು ಸರಿ ಪ್ರಿಯಾ! ನಿಮ್ಮ ಪೂರ್ಣಚಂದ್ರ ತೇಜಸ್ವಿ ಈಗ ಎಲ್ಲಿದ್ದಾನೆ?"

ಎನ್ನುತ್ತಾ ಹೊಸ ಟಾಪಿಕ್ ಸ್ಟಾರ್ಟ್ ಮಾಡಿದಳು ರಜನಿ.

"ಯಾರು? ಬಾಲಚಂದ್ರನನ್ನು ಕೇಳುತ್ತಿರುವೆಯಾ?"

"ಮತ್ತೆ ಇನ್ಯಾರನ್ನು ಕೇಳಲಿ? ಅವನು ಭಾರತಿಯನ್ನು ಗಂಟು ಹಾಕಿಕೊಂಡು ಬಂದಮೇಲೆ, ಅವಳ ಸೆರೆಯಲ್ಲಿ ಬಂದಿಯಾದಂತಿದ್ದಾನೆ"

—ಎಂದು ಕಿಲಕಿಲನೆ ನಕ್ಕಳು ರಂಜನಿ.

"ಏನಾದರೂ, ಈ ಮಧ್ಯ ಬಾಲಚಂದ್ರ ಬಹಳ ಇಕ್ಕಟ್ಟಿಗೆ ಸಿಲುಕಿಕೊಂಡಿದ್ದಾನೆ"

—ಎಂದು ಹೇಳುತ್ತಾ ತಲೆ ಬಾಚಿಕೊಳ್ಳತೊಡಗಿದ ರವಿಕಾಂತ.

"ಹೊಸ ವಿಷಯವೇ ಅಲ್ಲ; ಚಿಂತಿಸಬೇಕಾದ ವಿಷಯ ಸಹ. ಸೌಂದರ್ಯವತಿಯಾದ ಪತ್ನಿ, ಒಳ್ಳೆಯ ಉದ್ಯೋಗ, ಬೇಕಾದಷ್ಟು ಆಸ್ತಿ ಪಾಸ್ತಿಗಳ ಸ್ವರ್ಗಾನಂದ ಅನುಭವಿಸುತ್ತಿದ್ದಾನೆಂದು ನಾನು ಭಾವಿಸಿಕೊಂಡಿದ್ದೆ"

"ಈಗ ಚಿಂತಿಸಬೇಕಾದ ಅವಶ್ಯಕತೆಯು ಭಾರ ಏನು ತಾನೆ ಅವನಮೇಲೆ

ಅಣ್ಣನಿಚ್ಛೆಯಾದ್ದರಿಂದಲೇ ಹೇಳುತ್ತಿರುವುದು ಇದಿಲ್ಲದ್ದರೆ ಸುಮ್ಮನೆ ನಾನು ಏಕೆ ಹೇಳುತ್ತಿದ್ದೆ. ಆ ಚಂಚಲಾದೇವಿ ಅವನನ್ನು ಆರಾಧಿಸಿದಳು ಬಾಲಚಂದ್ರನಿಗೆ ಅವಳ ಮೇಲೆ ಆ ಅಭಿಪ್ರಾಯವಿರಲಿಲ್ಲ. ಯಾರಿಗೂ ಹೇಳದೇ ಕೇಳದೇ ಐಶ್ವರ್ಯವಂತರ ಸುಂದರ ತರುಣಿಯಾದ ಭಾರತಿಯನ್ನು ನೋಡಿ ಗಾಂಧರ್ವ ಮಾಡಿಕೊಂಡನು. ಚಂಚಲಾದೇವಿ ತನ್ನನ್ನು ವಿವಾಹವಾಗೆಂದೂ ಇಲ್ಲವೆ ರಹಸ್ಯವಾಗಿಯಾದರೂ ಪ್ರೇಯಸಿಯನ್ನಾಗಿರಿಸಿಕೊಳ್ಳೆಂದು ಬಾಲಚಂದ್ರನನ್ನು ಬಹಳ ವಿಧವಾಗಿ ಪ್ರಾರ್ಥಿಸಿಕೊಂಡಳು. ಬಾಲಚಂದ್ರನ ವಿಷಯ ನಿನಗೆ ತಿಳಿದೇ ಇದೆ. ಅವನು ಅವಳ ಯಾವ ಮಾತನ್ನೂ ಅಂಗೀಕರಿಸಲಿಲ್ಲ ಆದುದರಿಂದ ಚಂಚಲಾದೇವಿ ಕೆಣಕಿಸಿಕೊಂಡ ನಾಗರ ಹಾವಿನಂತಾದಳು. ಅವನನ್ನು ಮನಸಾರೆ ತೆಗಳಿದಳು...."

"ಇದೆಲ್ಲಾ ಇಂಟರ್ವೆಲ್ ಮುಂಚಿನ ಕಥೆಯೇ ತಾನೇ? ಇದೆಲ್ಲಾ ನನಗೆ ತಿಳಿದೇ ಇದೆ"

— ಎಂದು ನಾಲಿಗೆ ಚಪ್ಪರಿಸಿದಳು ರಂಜನಿ.

"ಮುಂದಿನ ಕಥೆಯನ್ನು ಸಾವಧಾನವಾಗಿ ಕೇಳು. ಮಧ್ಯ ಮಾತನಾಡಬೇಡ

"ಹೇಳಿ ಯಾರು ಬೇಡವೆಂದರು?"

"ಚಂಚಲಾದೇವಿ ತನಗೆ ತಗುಲಿದ ಮಾನಸಿಕ ಆಘಾತ. ನೋವನ್ನು ಭರಿಸಲಾರದಾದಳು. ಅವನಿಂದ ನಿರಾಕರಿಸಲ್ಪಟ್ಟ ಆಶಾಭಂಗ ತಾಳಲಾರದಾದಳು. ಬಾಲಚಂದ್ರನ ಸ್ಮರಣೆಯಲ್ಲಿ ಹುಚ್ಚಳಾದಳು. ರಮೇಶ ಎಂಬ ಯುವಕನೋರ್ವ ಅವಳನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಅವನು ಅವಳನ್ನು ಒಲಿಸಿಕೊಳ್ಳಲು ಬಹಳವಾಗಿ ಪ್ರಯತ್ನಿಸಿ ವಿಫಲನಾಗಿದ್ದನು. ಅವಳು ಅವನನ್ನು ತನ್ನ ಮನೆಗೆ ಕರೆಸಿಕೊಂಡಳು. ಅವನಿಗೆ ಅವಳು ತನ್ನ ಸರ್ವಸ್ವವನ್ನೂ ಧಾರೆಯೆರೆದಳು."

"ಇದರಲ್ಲಿ ಚಿಂತಿಸಬೇಕಾದ ಅವಶ್ಯಕತೆಯಾದರೂ ಏನಿದೆ?"

"ಮಧ್ಯೆ ಮಾತನಾಡುಬೇಡವೆಂದಿಲ್ಲವೇ? ಮುಂದೆ ಕೇಳು

"ಚಂಚಲಾದೇವಿ ತನ್ನ ವಿವೇಕವನ್ನು ಸಂಪೂರ್ಣವಾಗಿ ಕಳೆದುಕೊಂಡಳು. ತನ್ನ ಉಸಿರು ನಿಟ್ಟುಸಿರುಗಳನ್ನೇ ಮರೆತಳು. ಹೀಗಿರುವಾಗ ಕೆಲ ದಿನಗಳ ಹಿಂದೆ ಫೈವ್ ಸ್ಟಾರ್ ಹೋಟೆಲಿನಲ್ಲಿ ಸುಮಾರು ನಲವತ್ತು ಸಾವಿರ ರೂಪಾಯಿ

ಗಳು ಅಪಹರಿಸಿ ಕಸಿದುಕೊಳ್ಳಲ್ಪಟ್ಟವು. ಅಪಹರಿಸಿದವರು ಯಾರೆಂಬುವನ್ನು ತನಿಖೆ ಮಾಡಲು ಆ ಕೇಸು ಕ್ರೈಮ್ ಬ್ರಾಂಚ್ ಇನ್ಸ್‌ಪೆಕ್ಟರ್ ಆಗಿರುವ ನಮ್ಮ ಬಾಲಚಂದ್ರನ ಬಳಿಬಂದಿತು. ಅಲ್ಲಿಯೇ ಬಂದಿದೆ ಚಿಂತಿಸಬೇಕಾದ ಸಮಸ್ಯೆ"

"ಚಂಚಲಾದೇವಿ ವಿವೇಕ ಕಳೆದುಕೊಳ್ಳುವುದಕ್ಕೂ, ಹೋಟಲಿನಲ್ಲಿ ಕ್ಯಾಷ್ ಹೋಗುವುದಕ್ಕೂ ಯಾವ ಸಂಬಂಧವಿದೆ ?"

—ಎಂದು ಧೈರ್ಯದಿಂದ ಕೇಳಿದಳು ರಜನಿ.

"ಸಂಬಂಧ ಇದೆಯಾದ್ದರಿಂದಲೇ ಸಮಸ್ಯೆಯೊದಗಿ ಬಂದಿದೆ. ಅರ್ಧರಾತ್ರಿ ಕಳೆದನಂತರ ಒಂದು ಕಳ್ಳರ ಕೂಟ ಹೋಟಲಿನೊಳಕ್ಕೆ ಪ್ರವೇಶಿಸಿ, ಡ್ಯಾನ್ಸ್ ಹಾಲಿನೊಳಕ್ಕೆ ನುಗ್ಗಿ ಪಿಸ್ತೂಲುಗಳನ್ನು ತೋರಿಸಿ, ಬೆದರಿಸಿ ಆಗಮಿಸಿದ್ದವರ ಪರ್ಸ್ ಸಂಗ್ರಹಿಸಿ ದರೋಡೆ ನಡೆಸಿದರು. ಅದಕ್ಕೆ ಕಥಾನಾಯಕಿ ಓರ್ವ ಸ್ತ್ರೀ. ಅವಳೇ ಚಂಚಲಾದೇವಿ"

—ಎಂದು ಹೇಳಿದ ರವಿಕಾಂತ.

"ನೀವು ಹೇಳುತ್ತಿರುವುದು ಬಹಳ ಚೆನ್ನಾಗಿದೆ. ಎಂತಹ ವಿವೇಕಶೂನ್ಯಳಾದರೂ ಚಂಚಲಾ ಇಂತಹ ಕೆಲಸ ಮಾಡುತ್ತಿದ್ದಾಳೆಂದರೆ ನನಗೆ ಸ್ವಲ್ಪವೂ ನಂಬಿಕೆಯಿಲ್ಲ. ಅವಳು ಆ ರೀತಿ ಮಾಡಿದ್ದು ಯಾರಾದರೂ ಕಣ್ಣಾರೆ ನೋಡಿರುವರೇ? ಸುಮ್ಮನೆ ತಿನಕನೋಲೆ ತಿಸು ನಾನ ಪಡುತ್ತಿರುವಿರಿ"

"ನಮ್ಮವರಾರೂ ನೋಡದೇ ಇರಬಹುದು. ಹಣ ಕಳೆದುಕೊಂಡವರು ಅವಳ ರೂಪವನ್ನು ವರ್ಣಿಸಿದ್ದಾರೆ. ಅಲ್ಲದೆ ಕೆಲವು ಸುಳುಹುಗಳ ಆಧಾರದ ಮೇಲೆ ಅವಳನ್ನು ಅಪರಾಧಿಯೆಂದು ನಿರ್ಧರಿಸಲಾಗಿದೆ. ರಮೇಶ ಬಾಲಚಂದ್ರನಿಗೆ ಸ್ನೇಹಿತ. ಅವನು ಬಾಲಚಂದ್ರನಿಗೆ ಎಲ್ಲಾ ವಿಷಯ ವಿವರವಾಗಿ ತಿಳಿಸಿದ್ದಾನೆ. ಚಂಚಲಾದೇವಿ ಹಣ ಬಹಳವಾಗಿ ಸಂಪಾದಿಸಬೇಕೆಂದು ಹೇಳಿದಳಂತೆ. ಆ ಹಣಕ್ಕಾಗಿ ದರೋಡೆಯಾದರೂ ಪರವಾಗಿಲ್ಲವಂತೆ. ಕೊಲೆಮಾಡಿದರೂ ತಪ್ಪಿಲ್ಲವಂತೆ. ಫೈವ್ ಸ್ಟಾರ್ಸ್ ಹೋಟೆಲಿಗೆ ಅವನನ್ನೂ ಜೊತೆಯಲ್ಲಿ ಬರುವಂತೆ ಕರೆದಳಂತೆ. ಅವನು ಹೋಗಲಿಲ್ಲವಂತೆ. ಡ್ಯಾನ್ಸ್ ಹಾಲಿನಲ್ಲಿ ಪರ್ಸ್ ಕಳೆದುಕೊಂಡವರೆಲ್ಲಾ ಹೇಳಿದ ಮುಖ ಚಹರೆಗಳ ಆಧಾರದಿಂದ ಮಾರುವೇಷದಲ್ಲಿರುವ ಆ ಕಳ್ಳರ ರಾಣಿ, ಚೋರನಾರಿ ಚಂಚಲಾದೇವಿಯೇ ಎಂದು ಸ್ಥಿರವಾಗಿದೆ"

—ಎಂದು ಹೇಳಿದ ಪತ್ತೇದಾರ ರವಿಕಾಂತ.

"ನೀವು ಮಾಡುವುದು ಎಂತಹ ದೇಶ ಸೇವೆಯಾದರೂ ಅನಾವಶ್ಯಕವಾಗಿ ಚಂಚಲಾದೇವಿಯನ್ನು ಬಯಲಿಗೆಳೆಯಬೇಡಿ. ಮೊದಲೇ ಅವಳು ವ್ಯಾಕುಲಳಾಗಿದ್ದಾಳೆ. ನೀವು ಅವಳ ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸಬೇಡಿ"

ಸಲಹೆ ನೀಡಿದಳು ರಜನಿ.

"ಅವಳು ಅಪರಾಧಿಯಲ್ಲವೆಂದು ಕಂಡು ಬಂದರೆ ಖಂಡಿತಾ ನಿರಪರಾಧಿಯೆಂದು ಸಾರುತ್ತೇನೆ. ಅವಳ ಬಗ್ಗೆ ನೀನೇನೂ ಚಿಂತಿಸಬೇಡ"

....ಎಂದು ಹೇಳಿದ ಪತ್ತೇದಾರ ರವಿಕಾಂತ.

ಅಷ್ಟರಲ್ಲಿ ಟೆಲಿಫೋನ್ ಗಂಟೆ ಮೊಳಗಿತು!

ರಜನಿ ರಿಸೀವ್ ಮಾಡಿಕೊಳ್ಳಲು ಆ ಕಡೆಗೆ ಸಾಗಿದಳು.

# ಹನ್ನೆರಡು

ಫರೀದ್ ಏ ಕ್ಲಾಸ್ ಟೆಕ್ನಿಷಿಯನ್. ಅವನಿಗೆ ತಿಳಿಯದ ಇಂಜನಿಯ ರಿಂಗ್ ವಿದ್ಯೆಗಳಿರಲಿಲ್ಲ. ಅವನಿಗಿದ್ದ ವರ್ಕ್ ಶಾಪ್ ಚಿಕ್ಕದೇ ಆದರೂ ಅದ ರಲ್ಲಿ ಎಲ್ಲಾ ವಿಧವಾದ ಸ್ಪೇರ್‌ಪಾರ್ಟ್ಸ್ ಲಭಿಸುತ್ತಿದ್ದವು.

ಸುಂದರ ಒಂದನೇ ನಂಬರ್ ಡ್ರೈವರ್. ಅವನಿಗೆ ಮೊದಲು ಮೈಕ್ಯಾ ನಿಜಂ ವಿಷಯ ಅಷ್ಟೇನೂ ತಿಳಿದಿರಲಿಲ್ಲ. ವೈಕಲಿನ ಜೊತೆಗೆ ಸೇರಿದ ನಂತರ ಅವನೂ ಅದರ ವಿವರಗಳೆಲ್ಲವನ್ನೂ ತಿಳಿದುಕೊಂಡಿದ್ದನು.

ಫರೀದ್, ಸುಂದರರಿಬ್ಬರೂ ಎರಡು ವಾರಗಳ ಕಾಲ ಬಹಳ ಕಷ್ಟಪಟ್ಟು ಆ ವ್ಯಾನನ್ನು ತಮಗೆ ಬೇಕಾದ ರೀತಿಯಲ್ಲಿ ಸಿದ್ಧಗೊಳಿಸಿದರು.

ಆ ವ್ಯಾನಿನ ರೂಪ ವಿನ್ಯಾಸಗಳನ್ನು ಸಂಪೂರ್ಣವಾಗಿ ಬದಲಾಯಿಸಿದರು. ಅವರಿಗೆ ಬೇಕಾದ ವಿಧದಲ್ಲಿ ಎಲ್ಲಾ ರೀತಿ ಸೌಕರ್ಯ ಇರುವಂತೆ ಬದಲಿಸಿಕೊಂಡರು. ಅದರ ಸಾಮಾನುಗಳಲ್ಲಿ ಕೆಲವು ತೆಗೆದುಹಾಕಿ, ಅವುಗಳ ಸ್ಥಾನದಲ್ಲಿ ಬೇರೆ ಕೆಲವು ಗಟ್ಟಿಯಾದ ಸಾಮಾನು ಅಳವಡಿಸಿದರು. ತಮಗೆ ತೃಪ್ತಿಯಾಗುವಂತೆ ಮಾಡಿದರು.

ಜಾನ್‌ನನ್ನು ಕುರಿತು ಕೇವಲವಾಗಿ ಹೇಳುವದು ಸಾಧ್ಯವಿರಲಿಲ್ಲ. ಏಕೆಂದರೆ

ಅವನು ಕಬ್ಬನ್ ಪಾರ್ಕಿನ ಬಳಿ ನಿಲ್ಲಿಸಿದ್ದ ಯಾರದೋ ಒಂದು ಕಾರನ್ನು ಅಪ
ಹರಿಸಿಕೊಂಡು ತೆಗೆದು ಬಂದಿದ್ದನು.

ಅದರ ಬಣ್ಣ ಬದಲಿಸಿದರು. ನಂಬರ್ ಪ್ಲೇಟ್ ತೊಲಗಿಸಿ ಹೊಸ ನಂಬರ್ ಪ್ಲೇಟ್ ತಗುಲಿಸಿದರು. ಆ ಕಾರಿನ ಮಾಲಿಕನು ನೋಡಿದರೂ ಸಹ ತನ್ನದೇ ಎಂದು ಗುರ್ತಿಸುವುದಿರಲಿ, ಊಹಿಸಿಕೊಳ್ಳಲೂ ಸಹ ಅವಕಾಶವೇ ಲಭಿಸದಂತೆ ಮಾಡಿದರು.

ಆ ಕಾರು ಚಂಚಲಾದೇವಿಗಾಗಿ.

ದರೋಡೆಯ ರಾಣಿಯಾಗಿ ಅವಳ ಪಾತ್ರ ಬಹು ದೊಡ್ಡದಲ್ಲವೆ?

ಆ ದಿನ ಬೆಳಿಗ್ಗೆಯೇ ಅವಳು ಶೆಡ್ಡಿಗೆ ಬಂದಳು.

ವ್ಯಾನನ್ನು ನೋಡಿ ಬಹಳ ಆಶ್ಚರ್ಯಗೊಂಡಳು .ಅದರ ಹೊಸ ವಿನ್ಯಾಸ ಕಂಡು ತಲೆತೂಗಿದಳು.

ಆ ವ್ಯಾನು ಯಾರೋ ವಿದೇಶಿಯನೊಬ್ಬನು ತನ್ನೊಂದಿಗೆ ಆ ದೇಶದಿಂದ ತಂದ ವಾಹನದಂತಿತ್ತು.

"ಶಭಾಷ್ ಬಹಳ ಅದ್ಭುತವಾಗಿದೆ"

—ಎಂದು ಫರೀದನನ್ನು ನೋಡುತ್ತಾ ಮೆಚ್ಚಿಗೆ ಸೂಚಿಸಿದಳು ಚಂಚಲಾ.

ತನಗೆ ಕಾಂಪ್ಲಿಮೆಂಟ್ ಬಾರದೇ ಇದ್ದುದಕ್ಕೆ ತನ್ನ ಮುಖವನ್ನು ಸಿಡುಕಿ ನಿಂದ ಒಂದು ಪಕ್ಕಕ್ಕೆ ತಿರುಗಿಸಿಕೊಂಡ ಸುಂದರ.

ಫರೀದ ಅವಳ ಮುಂದಕ್ಕೆ ಬಂದು—

"ಸುಂದರ ಸಹಕರಿಸದಿದ್ದರೆ ಈ ವ್ಯಾನನ್ನು ಇಷ್ಟು ಅದ್ಭುತವಾಗಿ ಬದಲಿಸಲು ಸಾಧ್ಯವಾಗುತ್ತಿರಲಿಲ್ಲ"

—ಎಂದು ಹೇಳಿದನು.

"ಹೌದೇ?"

ಸುಂದರನ ಮುಖ ನೋಡಿ ಕಣ್ಣು ಮಿಟುಕಿಸಿದಳು ಚಂಚಲಾ.

ಫರೀದನ ಹಿಂದೆ ನಿಂತಿದ್ದ ಆತ ಬೆರಳು ತನ್ನ ತುಟಿಗಳ ಮೇಲಿಟ್ಟುಕೊಂಡು ಚುಂಬಿಸಿ, ಪ್ರತಿಯಾಗಿ ತಾನೂ ಕಣ್ಣು ಮಿಟುಕಿಸಿದನು ಸುಂದರ.

ಮೋಹಕವಾಗಿ ನಗೆ ಬೀರಿದಳು ಆಕೆ.

ಫರೀದ್ ಅವರಿಬ್ಬರ ಸಂಜ್ಞೆಗಳಾವುವೂ ಗಮನಿಸಲಿಲ್ಲ.

ಅಗ್ನಿಗೆ ಆಹುತಿಯಾಗಬೇಕಾದ ತನ್ನ ಕಾರಿನ ಕಡೆಗೆ ಒಂದು ಸಾರಿ ದೃಷ್ಟಿ ಬೀರಿದಳು.

ಒಂದುಸಾರಿ ಅದರಲ್ಲಿ ಕುಳಿತು ಸ್ಟಾರ್ಟ್ ಮಾಡಿ ಕಾಂಪೋಂಡಿನೊಳಗಡೆಯೇ ತಿರುಗಾಡಿಸಿ ನೋಡಿದಳು.

"ಓ ಕೆ"

— ಎಂದಳು ಒಯ್ಯಾರದಿಂದ ಕಾರು ಇಳಿಯುತ್ತಾ.

ಆ ಶೆಡ್ ಕಾಂಪೌಂಡಿನಲ್ಲಿಯೇ ಒಂದು ಮೂಲೆಯಲ್ಲಿ ಎರಡು ಅಂತಸ್ತುಗಳ ಚಿಕ್ಕ ಮಹಡಿಯಿತ್ತು. ಅವರೆಲ್ಲರ ನಿವಾಸಸ್ಥಾನ ಆ ಮಹಡಿಯೇ ಆಗಿತ್ತು.

ಮೈಕಲ್, ಜಾನ್‌ರಿಬ್ಬರೂ ಅಲ್ಲಿಯೇ ಇದ್ದರು.

ಮಿಕ್ಕವರೂ ಸಹ ಅಲ್ಲಿಗೆ ಸೇರಿದರು

ಬಿಸ್ಕತ್ತು ತಿನ್ನುತ್ತಾ, ಕಾಫಿ ಕುಡಿಯುತ್ತಾ ಎಲ್ಲರೂ ಕುರ್ಚಿಗಳಲ್ಲಿ ಕುಳಿತರು.

"ನಮ್ಮ ಮುಂದಿನ ಕಾರ್ಯಕ್ರಮವೇನೆಂಬುದು ಇಂದೇ ನಿರ್ಧಾರ ಮಾಡಿಕೊಳ್ಳೋಣ"

—ಎಂದು ಹೇಳಿದ ವ್ಯಕ್ತಿ.

ಚಂಚಲಾ ಕಾಫಿ ಕುಡಿದು ಮುಗಿಸಿ ಮುಖ ಸರಿಪಡಿಸಿಕೊಂಡಳು.

"ಫ್ರೆಂಡ್ಸ್ ಇದುವರೆವಿಗೂ ನಾವು ನಮ್ಮ ವ್ಯವಹಾರಗಳನ್ನೆಲ್ಲಾ ಜಯಭೇರಿಯಿಂದ ಸಾಧಿಸುತ್ತಾ ಬರುತ್ತಿದ್ದೇವೆ. ಉದಾಹರಣೆಗೆ ಫೈವ್ ಸ್ಟಾರ್ ಹೋಟಲಿನ ವಿಷಯ ತೆಗೆದುಕೊಳ್ಳೋಣ. ನಾವು ಊಹಿಸಿದ್ದಕಿಂತಲೂ ಹೆಚ್ಚಿನ ಹಣ ಸಂಪಾದಿಸಿದೆವು. ಆ ಹಣದಿಂದ ಒಂದು ವ್ಯಾನ್ ಸಹ ಕೊಂಡೆವು. ಬಹಳ ಚೆನ್ನಾಗಿ ಪದ್ಮವ್ಯೂಹ ರಚಿಸಿದ್ದೇವೆ. ಇದನ್ನು ಹೇಗೆ ಅಗ್ನಿಗೆ ಆಹುತಿ ಮಾಡಬೇಕೆಂಬುದು ನಾನು ಪ್ಲಾನ್ ಹಾಕಿಕೊಂಡಿದ್ದೇನೆ

"ಇನ್ನು ಕೊನೆಯದಾಗಿ ನಿಮ್ಮೆಲ್ಲರಿಗೂ ಹೇಳುವ ವಿಷಯಗಳನ್ನು ಚೆನ್ನಾಗಿ ಆಲಿಸಿ ಮನನ ಮಾಡಿಕೊಳ್ಳಿ. ನಮಗಿದು ಜೀವನ್ಮರಣಗಳ ಸಮಸ್ಯೆ. ಲಕ್ಷಾಂತರ ರೂಪಾಯಿಗಳ ವ್ಯವಹಾರಗಳಲ್ಲಿ ಮುಖ್ಯವಾಗಿ ದರೋಡೆಕೋರರು ಅದೆಷ್ಟು ನಿರ್ದಾಕ್ಷಿಣ್ಯವಾಗಿ ವರ್ತಿಸುತ್ತಾರೆಂಬುದು ನಿಮಗೆ ತಿಳಿದಿರುವ ವಿಷಯವೇ ಆಗಿದೆ. ನೀವೆಲ್ಲಾ ಒಂದುಗೂಡಿ ಕೆಲಸ ಮಾಡಬೇಕು. ನಾವು ನೋಡಿದ

ಇಂಗ್ಲೀಷ್ ಸಿನಿಮಾಗಳಲ್ಲಿ ಕಂಡು ಬರುವ ಸಾಹಸದಂತೆ ಮುನ್ನುಗ್ಗಿ ಆ ಟ್ರಕ್ ದರೋಡೆ ಮಾಡೋಣ”

“ಸರಿಯಾಗಿ ನಾವು ಊಹಿಸಿಕೊಂಡಂತೆ ನಡೆದರೆ, ಟ್ರಕ್ ನಮ್ಮ ಹಸ್ತಗತ ವಾಗುತ್ತದೆ. ಅದನ್ನು ವ್ಯಾನಿನೊಳಕ್ಕೆ ಹತ್ತಿಸೋಣ. ಅದನ್ನು ದೂರ ತೀರಕ್ಕೆ ತೆಗೆದುಕೊಂಡು ಹೋಗೋಣ. ನಮ್ಮ ಫರೀದ್ ಇದ್ದೇ ಇದ್ದಾನೆ. ಟ್ರಕ್ಕನ್ನು ತೆರೆಯುವ ಭಾರ ಆತನದೇ. ಅನಂತರ ಅದರಲ್ಲಿನ ಹಣವನ್ನು ಸಮಭಾಗವಾಗಿ ಹಂಚಿಕೊಳ್ಳೋಣ. ಅಮೇಲೆ ಅವರವರ ದಾರಿ ಹಿಡಿದು ಹೋಗೋಣ....”

—ಎಂದು ವಿಷಯ ವಿವರಿಸುತ್ತಾ ಹೇಳಿದಳು ಚಂಚಲಾ.

“ನಾಡಿದ್ದು ಶುಕ್ರವಾರ. ಬಹಳ ಒಳ್ಳೆಯ ದಿನ. ಅನುಕೂಲವಾದ ಶುಭ ದಿನ. ಎಲ್ಲಾ ವಿಧಗಳಲ್ಲಿಯೂ ನಮ್ಮ ಜಾಣತನ ಉಪಯೋಗಿಸಿ ಈ ಪ್ಲಾನನ್ನು ಸಾಧಿಸೋಣ. ಮುಂದಿನ ವಾರದಲ್ಲಿಯೇ ‘ವಿಜಯಪುರ,ದಲ್ಲಿ ವಿಶೇಷ ಉತ್ಸವಗಳು ಪ್ರಾರಂಭವಾಗುತ್ತವೆ. ನಾವು ಆ ಉತ್ಸವಕ್ಕೆ ಬಂದವರಂತೆ ನಟಿಸೋಣ. ಎಲ್ಲಾ ವ್ಯಾನುಗಳ ಮಧ್ಯೆ ನಮ್ಮ ವ್ಯಾನ್ ಜೊತೆಗೂಡಿಸೋಣ. ಯಾರೂ ಅನುಮಾನಿಸದ ರೀತಿಯಲ್ಲಿ ಎಚ್ಚರ ವಹಿಸೋಣ”

“ನೀನೂ ಸುಂದರ ಇಬ್ಬರೂ ಬಹಳ ಜಾಣತನ ಉಪಯೋಗಿಸುವಿರಿ. ವ್ಯಾನ್ ತೆಗೆದು ಕೊಂಡು ಬರಲು ಹೋಗುವಾಗ ನೀವು ಪತಿ ಪತ್ನಿಯರಾಗಿ ಅದ್ಭುತವಾಗಿ ನಟಿಸಿದಿರಿ. ವಿಷಯ ತಿಳಿದ ಮೇಲೆ ನನಗೆ ಬಹಳ ಸಂತೋಷವಾಯಿತು. ಆ ವಿಜಯಪುರದ ಉತ್ಸವಗಳ ಮಧ್ಯೆ ನೀವಿಬ್ಬರೂ ಪತಿ ಪತ್ನಿಯರಂತೆ ನಟಿಸಿದರೆ ಯಾರೂ ನಮ್ಮನ್ನು ಅನುಮಾನಿಸಲು ಸಾಧ್ಯವಿಲ್ಲ”

—ಎಂದು ಹೇಳಿದ ಮೈಕಲ್.

ಚಂಚಲಾ ಸುಂದರನ ಕಡೆ ಓರೆನೋಟದಿಂದ ನೋಡಿದಳು.

ಮೈಕಲ್ ಕುರ್ಚಿಯಿಂದ ಎದ್ದು ಕಿಟಕಿಯ ಬಳಿಗೆ ಬಂದ.

“ನಮ್ಮ ವ್ಯಾನಿನಲ್ಲಿ ಯಾವ ಲೋಪವೂ ಇದ್ದಂತೆ ಕಾಣಿಸುತ್ತಿಲ್ಲ. ಎಲ್ಲರೂ ಏಕಾಭಿಪ್ರಾಯದಿಂದ ಮುನ್ನುಗ್ಗಿದರೆ ಕಷ್ಟಗಳನ್ನೆಲ್ಲಾ ಎದುರಿಸಿ ಮುಂದಕ್ಕೆ ಸಾಗಬಲ್ಲೆವು. ನಮಗೆ ವಿಜಯಲಕ್ಷ್ಮಿ ವರಿಸದೇ ಇರಲಾರಳು”

—ಎಂದು ಮತ್ತೆ ಹೇಳಿದನು ಮೈಕಲ್.

“ವಿಜಯಲಕ್ಷ್ಮಿ ನಮ್ಮನ್ನು ಖಂಡಿತ ವರಿಸಿಯೇ ತೀರುತ್ತಾಳೆ”

—ಎಂದು ಸಂತೋಷದಿಂದ ನುಡಿದ ಜಾನ್.

"ಅವರವರ ಕಾರ್ಯಕ್ರಮಗಳು ಅವರವರಿಗೆ ಜ್ಞಾಪಕವಿವೆಯೆಂದೆ ಭಾವಿಸಿಕೊಂಡಿದ್ದೇನೆ. ಎಂತಹ ಪರಿಸ್ಥಿತಿಯಲ್ಲಿಯೂ ಈ ಪ್ರೊಗ್ರಾಂ ರಹಸ್ಯವಾಗಿಯೇ ಉಳಿಯುತ್ತದೆಂದೂ, ಯಾರೊಬ್ಬರಿಂದಲೂ ನಮ್ಮ ವಿನಃ ಬೇರೊಬ್ಬರಿಗೆ ಈ ರಹಸ್ಯ ತಿಳಿಯಲಾರದೆಂದು ನಾನು ನಂಬುತ್ತಿದ್ದೇನೆ. ಬಂದೇ ಮಾತಿನಮೇಲೆ ನೀವೆಲ್ಲರೂ ನಿಲ್ಲಬೇಕು. ನಾಳೆ ನನಗೆ ಕೆಲವು ಅರ್ಜೆಂಟ್ ಕೆಲಸಗಳಿವೆ. ಅವುಗಳೆಲ್ಲಾ ಮುಗಿಸಿಕೊಳುತ್ತೇನೆ. ಮತ್ತೆ ಶುಕ್ರವಾರ ಬೆಳಿಗ್ಗೆ ಆರು ಗಂಟೆಗೆಲ್ಲಾ ಇಲ್ಲಿ ಕೂಡೋಣ. ನಾನು ಹೊರಡುತ್ತೇನೆ"

—ಎನ್ನುತ್ತಾ ಕೊಠಡಿಯ ಹೊರ ಬಂದು ಮೆಟ್ಟಿಲು ಇಳಿದು ಹೊರಟು ಹೋದಳು.

ಚಂಚಲಾ ಹೊರಟ ಕಡೆಯೇ ನೋಡುತ್ತಾ ತುಟಿಗಳನ್ನು ನಾಲಿಗೆಯಿಂದ ಶೇವ ಮಾಡಿಕೊಂಡ ಸುಂದರ.

# ಹದಿಮೂರು

ವಾತಾವರಣ ತಮಗೆ ಬಹಳ ಅನುಕೂಲವಾಗಿದೆಯೆಂದು ಶುಕ್ರವಾರ ಬೆಳಗ್ಗೆ ಅವರೆಲ್ಲರಿಗೂ ತಿಳಿಯಿತು.

ಬ್ಯಾಂಕ್ ಆಫ್ ಮೈಸೂರಿನ ಹೆಡ್ ಆಫೀಸಿನಿಂದ ಎಲ್ಲಾ ಎಚ್ಚರಿಕೆ ನೀಡಿದ ನಂತರ ಫೈನಲ್ಲಾಗಿ ಒಂದು ಸಾರಿ ಚೆಕಪ್ ಮಾಡಿಕೊಂಡು 'ಓ.ಕೆ' ಎಂದು ಕೊಂಡು ಹೊರಟಿತು ಟ್ರಕ್.

ಇಂಡಿಯಾ ಏಜನ್ಸೀಸ್ ಬಹು ಪ್ರಸಿದ್ಧಿ ಪಡೆದ ಸಂಸ್ಥೆ. ಅವರು ಪ್ರಜಾ ಸೇವೆಯಲ್ಲಿ ಹೆಸರು ಗೌರವಗಳನ್ನು ಪಡೆದಿದ್ದರು. ಅನೇಕ ವಿಧವಾದ ಹೊಸ ವಿಧಾನಗಳನ್ನು ಬಳಸಿಕೊಂಡು ಎಲ್ಲರನ್ನೂ ಚಕಿತರನ್ನಾಗಿ ಮಾಡುವುದರಲ್ಲಿ ಆ ಸಂಸ್ಥೆಯೇ ಭಾರತದಲ್ಲಿ ಮೊದಲನೆಯದಾಗಿತ್ತು.

ಆ ಟ್ರಕ್ಕನ್ನು ಹೊಸದಾಗಿ ರಸ್ತೆಯ ಮೇಲೆ ಬಿಟ್ಟಾಗ ಅನೇಕ ಪತ್ರಿ ಅನೇಕ ವಿಧವಾಗಿ ಅದನ್ನು ಕುರಿತು ಸಾಕಷ್ಟು ಲೇಖನ ಪ್ರಕಟಿಸಿದ್ದವು. ಆ ಸಂಸ್ಥೆಯ ಸೇವೆಗೆ ಜನರು ಬಹಳ ಆಶ್ಚರ್ಯಪಟ್ಟರು. ಟ್ರಕ್ಕನ್ನು ಕುರಿತು ಬಹಳವಾಗಿ ಹೊಗಳಿ ಜನರನ್ನು ಚಕಿತರನ್ನಾಗಿ ಮಾಡಿದವರೆಂದರೆ ಆ ಪತ್ರಿಕೆಗಳವರೇ.

ಆದರೆ ಕೆಲಕಾಲ ಕಳೆದನಂತರ ಪ್ರಜೆಗಳಲ್ಲಿ ಆ ಟ್ರಕ್ ವಿಷಯದಲ್ಲಿ ಮೊದಲಿದ್ದ ಕುತೂಹಲ ಕಡಿಮೆಯಾಗಿತ್ತು.

ಎಷ್ಟೋ ವಿಧವಾಗಿ ಹೇಳಿದರೂ ಇಂಡಿಯಾ ಏಜನ್ಸೀಸ್ ಟ್ರಕ್ ನೊಸರಿ ನಷ್ಟು ಕುತೂಹಲಕಾರಿಯಾಗಿ ಈಗಿರಲಿಲ್ಲ.

ಆದರೆ ಡ್ರೈವರ್ ಕೃಷ್ಣಸಿಂಗ್‌ನಾಗಲಿ, ಗಾರ್ಡ್ ಸೈಯದ್‌ನಾಗಲಿ ತಮ್ಮ ಕರ್ತವ್ಯ ಮರೆತಿರಲಿಲ್ಲ. ತಮ್ಮ ವಿದ್ಯುಕ್ತ ಕರ್ತವ್ಯಗಳನ್ನು ಪಾಲಿಸುವುದರಲ್ಲಿ ಸ್ವಲ್ಪ ಮಾತ್ರವೂ ಅವರು ಅಜಾಗರೂಕರಾಗಿರಲಿಲ್ಲ.

ಆದುದರಿಂದಲೇ ಒಂದು ಸಾರಿಗೆ ಎರಡು ಬಾರಿ ಚೆಕ್ ಮಾಡಿಕೊಂಡು ಟ್ರಕ್ ಏರಿ ರಸ್ತೆಯ ಮೇಲಕ್ಕೆ ತಂದರು.

ಅರ್ಧ ಗಂಟೆಯಲ್ಲಿ ಅದು ನಗರದ ಸರಹದ್ದು ದಾಟಿತು.

ಏಜನ್ಸೀಸ್ ಆಫೀಸಿಗೆ ಆ ವಿಷಯ ತಿಳಿಸಿದರು.

ಆನಂತರ ಅರ್ಧ ಗಂಟೆ ಕಳೆದಮೇಲೆ ವೈರ್‌ಲೆಸ್ ಮೂಲಕ ಏಜನ್ಸಿ ಯಿಂದ ಸಂದೇಶ ಬಂದಿತು.

ಸಾಧ್ಯವಾದಷ್ಟು ಬೇಗನೆ ಟ್ರಕ್ ಬ್ಯಾಂಕಿನ ಬಳಿಗೆ ಸೇರಬೇಕೆಂದೂ, ಸ್ವಲ್ಪ ಮಾತ್ರವೂ ಅಜಾಗರೂಕತೆಯಿಂದ ಇರಬೇಡಿರೆಂದೂ ಜೊತೆಗೆ ಅವರಿ ಗೊಂದು ವಾರ್ನಿಂಗ್ ಸಹ ಜೋಡಿಸಿ ಹೇಳಿದರು.

ಎರಡು ಗಂಟೆ ಕಾಲಚಕ್ರದಲ್ಲಿ ಉರುಳಿದವು. ಸುಮಾರು ಅರ್ಧ ದೂರ ಬಂದು ಬಿಟ್ಟಿದ್ದಿತು ಟ್ರಕ್.

ಗಾರ್ಡ್ ಸೈಯದ್ ಹಿಂದೆ ಕೆಲಕಾಲ ಮಿಲಿಟರಿಯಲ್ಲಿ ಕೆಲಸ ಮಾಡಿದ್ದನು. ಅಲ್ಲಿಯ ರಣರಂಗದ ಸಾಹಸಗಳನ್ನು ಕಥೆಯ ರೂಪದಲ್ಲಿ ಡ್ರೈವರಿಗೆ ಹೇಳುತ್ತಿದ್ದ. ಡ್ರೈವರ್ ಕೃಷ್ಣಸಿಂಗ್ ಮಧ್ಯ ಮಧ್ಯ ಸಿಳ್ಳು ಊದುತ್ತಾ ಅವನ ಕಥೆಯನ್ನು ಉತ್ಸಾಹದಿಂದ ಕೇಳುತ್ತಿದ್ದನು.

ಟ್ರಕ್ ಡೆಂಜರಸ್ ಕಾರ್ನರ್ ಆಗಿದ್ದ ಬ್ಯಾಂಡ್ ಬಾರ್ ಕಾರ್ನರ್ ಬಳಿಗೆ ಬಂತು.

ಆ ದಾರಿಯಲ್ಲಿ ಅವಕ್ಕೆ ಮೊದಲು ಅನೇಕಸಾರಿ ಪ್ರಯಾಣವನ್ನು ಮಾಡಿದ್ದರು. ಅದು ಅಪಾಯದ ಸ್ಥಳವೆಂಬುದು ಅವರಿಗೆ ತಿಳಿದೇ ಇತ್ತು. ಆದರೂ ಅಲ್ಲಿ ಸ್ವಲ್ಪ ಎಚ್ಚರಿಕೆಯಿಂದ ಹೋಗುವುದು ಅವರ ಕರ್ತವ್ಯ. ಅದಕ್ಕೆ ಡ್ರೈವರ್ ಕೃಷ್ಣಸಿಂಗ್ ವೇಗ ಕಡಿಮೆ ಮಾಡಿದ. ಟ್ರಕ್‌ಗೆ ಅಪಾಯ ಸಂಭವಿಸುವುದು ಸರ್ವ ಸಾಧಾರಣವೇ ಆದರೆ ಟ್ರಕ್ ಎದುರಿಗೆ ಅಂತಹ ಭಯಂಕರ

ಹೃದಯವಿದ್ರಾವಕ ದೃಶ್ಯ ಕಂಡು ಬರುತ್ತದೆಂದು ಅವರಿಬ್ಬರೂ ಎಂದೂ ಊಹಿಸಿರಲಿಲ್ಲ.

ಆ ಬ್ಯಾಂಡ್ ಬಾರ್ ಕಾರ್ನರ್ ತಿರುವು ತಿರುಗುತ್ತಲೇ ಕಂಡು ಬಂದ ಆ ಘೋರ ದೃಶ್ಯ ಅವರನ್ನು ನಿಸ್ತೇಜಕರನ್ನಾಗಿ ಮಾಡಿತು. ಡ್ರೈವರ್ ಎಮರ್ಜೆನ್ಸಿ ಬ್ರೇಕ್ ತುಳಿದನು. ಟ್ರಕ್ ನಿಂತುಕೊಂಡಿತು. ಇಬ್ಬರೂ ಮುಂದಕ್ಕೆ ಬಗ್ಗಿ ನೋಡಿದರು.

ಡ್ರೈವರ್ ಆ ಸುಂದರ ತರುಣಿ ಯಾರೆಂದು ಗುರ್ತಿಸಿದನು.

ತಮ್ಮ ಟ್ರಕನ್ನು ಎರಡುಸಾರಿ ಓವರ್ ಚೇರ್ ಮಾಡಿದ ರೂಪಸಿ ಈ ತೆರನಾರಿ ದುರಂತಕ್ಕೆ ಈಡಾಗಿರುವುದನ್ನು ಕಂಡು ಅವರ ಹೃದಯ ಕಂಪಿಸಿತು.

ಅವಳು ಇದೇ ರೀತಿ ಕಾರು ಚಲಿಸಿದಲ್ಲಿ ಎಂದಾದರೂ ಒಂದು ದಿನ ಎಲ್ಲಿಯಾದರೂ ಇಂತಹ ಅಪಘಾತಕ್ಕೆ ಗುರಿಯಾಗದಿರಲಾರಳು. ಎಂದು ಅವಳು ಟ್ರಕ್ ಓವರ್ ಟೇಕ್ ಮಾಡಿದ ರೀತಿ ನೋಡಿ ಊಹಿಸಿಕೊಂಡಿದ್ದರು

"ಸ್ಟೈಯದ್ ಭೆಯ್ಯಾ!....ಆಕೆ ಜೀವಂತವಾಗಿರುವಳೋ ಇಲ್ಲವೇ ಅವಳ ಜೀವ ಪಕ್ಷಿ ಹಾರಿ ಹೋಗುವುದೋ ನೋಡಿ ಬಾ...."

—ಎಂದು ಹೇಳಿದ ಡ್ರೈವರ್.

ಬಾಗಿಲು ತೆಗೆದುಕೊಂಡು ಗಾರ್ಡ್ ಕೆಳಗೆ ಇಳಿದನು. ಆದರೂ ಅವನ ಕೈಯಲ್ಲಿ ಗನ್ ಸಿದ್ಧವಾಗಿಯೇ ಇತ್ತು.

ಗಾರ್ಡ್ ಅವಳ ಕಡೆ ನೋಡತೊಡಗಿದನು.

ಡ್ರೈವರ್ ಆ ಕಡೆಗೇ ಆತುರತೆಯಿಂದ ನೋಡತೊಡಗಿದ್ದ.

ಗಾರ್ಡ್ ಅವಳನ್ನು ಸಮೀಪಿಸಿದನು ಅವಳ ಕಡೆಗೆ ತೀಕ್ಷ್ಣವಾಗಿ ನೋಡಿದನು ಹಾಗೆ ನೋಡಿದಾಗ ಓರೆಗಣ್ಣಿನಿಂದ ತನನ್ನು ಪರೀಕ್ಷೆಯಿಂದ ನೋಡುತ್ತಿರುವಳೆಂದು ಗ್ರಹಿಸಿದನು.

ಗಾರ್ಡ್ ಸ್ಟೈಯದ್ ಮಹಾಧೈರ್ಯಶಾಲಿ. ಹೇಡಿ ಹೃದಯದವನಾಗಿರಲಿಲ್ಲ. ಕ್ಷಣದಲ್ಲಿ ಅವಳ ಮೋಸವನ್ನು ಗ್ರಹಿಸಿದನು ಕೂಡಲೇ ಆಕೆಗೆ ಗುರಿಯಿಡಲು ಸಿದ್ಧನಾದನು

ಅವನಿಗಿಂತಲೂ ಮಹಾಧೈರ್ಯಶಾಲಿ ಆ ಹೆಣ್ಣು, ಚಂಚಲಾದೇವಿ ಅವನು ತನ್ನ ಮೇಲೆ ಗನ್ ಗುರಿಯಿಡುವ ಮೊದಲೇ—

ಹ್ಯಾಂಡ್ಸಪ್!"

—ಎಂದಳು ಅವನಿಗೆ ಪಿಸ್ತೂಲು ಗುರಿಯಿಟ್ಟು.

ಗಾರ್ಡ್ ಸೈಯದ್‌ನಿಗೆ ಬುದ್ಧಿ ಭ್ರಮಣೆಯುಂಟಾಯಿತು. ನಾಟಕ ಆಡಿದಳೆಂದು ತಿಳಿಯುತ್ತಲೇ ಅವನ ಶರೀರ ಕೋಪೋದ್ರೇಕದಿಂದ ಕುದಿಯತೊಡಗಿತು.

ಸರಿಯಾಗಿ ಅದೇ ಸಮಯಕ್ಕೆ ಡ್ರೈವರ್ ಕೃಷ್ಣಸಿಂಗನ ಕೊರಳ ಬಳಿ ಪಿಸ್ತೂಲಿನ ಮೊನೆಯೊಂದು ತಣ್ಣಗೆ ತಗುಲಿತು.

"ಪ್ಲೀಜ್ ಹ್ಯಾಂಡ್ಸಪ್"

—ಎಂಬ ಶಬ್ದ ಡ್ರೈವರಿಗೆ ಕೇಳಿಸಿತು.

ಸೆಕೆಯಿಂದ ಬೆಂದು, ಬಳಲಿಹೋಗುತ್ತೇನೆಂದುಕೊಂಡು ಕಿಟಕಿ ಕನ್ನಡಿಗಳನ್ನು ಮೇಲಕ್ಕೆತ್ತಿರಿಸಿದ್ದ ಡ್ರೈವರ್ ಕೃಷ್ಣಸಿಂಗ್. ಆಗ ಈ ರೀತಿ ಅಪಾಯ ಇದ್ದಕ್ಕಿದ್ದಂತೆ ಸಂಭವಿಸಬಲ್ಲದೆಂದು ಅವನು ಊಹಿಸಿಯೇ ಇರಲಿಲ್ಲ.

ಚಂಚಲಾದೇವಿ ಹಾಗೆಯೇ ಎದ್ದು ನಿಂತಳು.

ಗಾರ್ಡ್ ಸೈಯದನಿಗೆ ಏನು ಮಾಡಲೂ ತೋರಲಿಲ್ಲ. ಆದರೆ ಅವನಲ್ಲಿ ಧೈರ್ಯ ಮಾತ್ರ ಕಡಿಮೆಯಾಗಿರಲಿಲ್ಲ. ಯಾವುದಾದರೂ ಒಂದು ವಿಧವಾಗಿ ಅವಳನ್ನು ವಶಪಡಿಸಿಕೊಳ್ಳಬಲ್ಲೆನೆಂಬ ಧೈರ್ಯವಿತ್ತು.

"ಬುಲ್ ಬುಲ್! ಎಂತಹ ನಾಟಕ ಆಡಿದೆ...."

—ಎಂದನು ಗಾರ್ಡ್ ನಗುತ್ತಾ.

"ಸ್ಟುಪಿಡ್ ಷಟಪ್!"

—ಎಂದು ಕಿರುಚಿದಳು ಚಂಚಲಾ.

ಅವಳ ಶರೀರವೆಲ್ಲಾ ಉರಿಯುತ್ತಿತ್ತು. ಜೊತೆಗೆ ಶರೀರಕ್ಕೆಲ್ಲಾ ಕುದಿಯುವ ರಕ್ತ ಮುದ್ದೆ ಮುದ್ದೆಯಾಗಿ ಬಳಲಿಕೊಂಡಿದ್ದರಿಂದ ಶರೀರವೆಲ್ಲಾ ಒಂದು ತರಹ ಜಿಗುಟಾಗಿತ್ತು.

ಸೈಯದ್‌ನನ್ನು ಗುಂಡು ಹಾರಿಸಿ ಕೊಲ್ಲುವುದೇ ಅಥವಾ ಹಗ್ಗ ಕಟ್ಟಿ ನೇಣು ಹಾಕಿಸುವುದೇ ಎಂದು ಆಲೋಚಿಸತೊಡಗಿದಳು ಚಂಚಲಾ.

ಆದರೆ ಅವಳ ಆಲೋಚನೆಗಳಿಗೆ ಅವಕಾಶವೇ ನೀಡದಂತೆ ಮಾಡಿದ ಜಾನ್.

ಪಕ್ಕದಲ್ಲಿಯೇ ಪೊದೆಯಲ್ಲಿ ಅಡಗಿ ಕುಳಿತಿದ್ದ ಜಾನ್ ಒಂದೇ ಒಂದು ಪಿಸ್ತೂಲಿನ ಗುಂಡಿನಿಂದ ಗಾರ್ಡನ ಕೆಲಸ ಸಮಾಪ್ತಿ ಮಾಡಿ ಕೆಳಕ್ಕೆ ಮಲಗಿಸಿದ. ಜಾನ್‌ನಿಗೆ ಟೈಮ್ ವೇಸ್ಟ್ ಮಾಡುವುದು, ರಿಸ್ಕ ತೆಗೆದುಕೊಳ್ಳುವುದು ಬಹುಕಾಲದಿಂದಲೂ ಬಗ್ಗಿ ಬಂದಿರಲಿಲ್ಲ. ಆತ ಬಹು ಆತುರ ಸ್ವಭಾವಿ.

ಗತ್ಯಂತರವಿಲ್ಲದೆ ತಾನೂ ಅದೇ ಕೆಲಸ ಮಾಡಿದ ಮೈಕಲ್.

ಡ್ರೈವರ್ ಕೃಷ್ಣಸಿಂಗ್ ಹಾಗೆಯೇ ಸ್ಟೇರಿಂಗ್ ಮೇಲೆ ಒರಗಿದ.

ಅವನು ಯಾವ ಬಟನ್ ಸಹ ಅದುಕದೇ ಸತ್ತಿದ್ದಕ್ಕೆ ಎಲ್ಲರಿಗೂ ಬಹಳ ಸಂತೋಷವಾಯಿತು.

ಎರಡು ಕೊಲೆಗಳ ರಕ್ತ ತರ್ಪಣದಿಂದ ಅವರ ಯೋಜನೆ ಸುಲಲಿತವಾಗಿ ನಡೆದು ಹೋಯಿತು.

ಜೋರಾಗಿ ಶಿಳ್ಳೆ ಹಾಕಿದ ಮೈಕಲ್.

ಎರಡು ನಿಮಿಷಗಳಲ್ಲಿ ವ್ಯಾನ್ ತೆಗೆದುಕೊಂಡು ಬಂದ ಸುಂದರ.

ಎರಡು ಶವಗಳನ್ನು ನೋಡಿದ್ದರಿಂದ ಸುಸ್ತಾದನು ಫರೀದ್.

ಅವನಲ್ಲಿನ ಉತ್ಸಾಹ ಸತ್ತು ಹೋಯಿತು. ಆದರೆ ಅವನ ವೇದನೆಯನ್ನು ಕುರಿತು ಗಮನ ನೀಡಿ, ಆ ಬಗ್ಗೆ ವಿಚಾರಿಸಲು ಯಾರಿಗೂ ಸಮಯ ಇರಲಿಲ್ಲ.

ಸದ್ಯಕ್ಕೆ ಆ ಪ್ರದೇಶದಿಂದ ದೂರಹೋಗುವದೇ ಅವರ ಯೋಜನೆ ಯಾವ ವಾಹನವೂ ಆ ಮಾರ್ಗವಾಗಿ ಬಾರದ ರೀತಿಯಲ್ಲಿ ಜಾಗ್ರತೆ ವಹಿಸಿದ್ದರು. ಆದರೂ ಭಯ ಆವರಿಸಿಕೊಂಡೇ ಇತ್ತು.

ಕೂಡಲೇ ಐರನ್ ಬಾಕ್ಸನ್ನು ವ್ಯಾನ್‌ಗೆ ಅಟ್ಯಾಚ್ ಮಾಡಿದರು. ಮೈಕಲ್, ಜಾನ್, ಸುಂದರರೂ ಜೋರಾಗಿ ವ್ಯಾನಿನೊಳಕ್ಕೆ ಅದನ್ನು ತಳ್ಳಿದರು. ಟ್ರಿಕ್ ಬಹಳ ಸುಲಭವಾಗಿ ವ್ಯಾನಿನೊಳಕ್ಕೆ ಬಂದು ಸೇರಿತು.

ಜಾನ್ ಎರಡು ಶವಗಳನ್ನೂ ಪೊದೆಗಳ ಮಧ್ಯಕ್ಕೆ ಎಳೆದು ಕಂದಕ ತೆಗೆದಲ್ಲಿ ಹಾಕಿ ಮುಚ್ಚಿದನು.

ಚಂಚಲಾ ಸರ ಸರನೆ ತನ್ನ ವಸ್ತ್ರಾಗಳನ್ನೆಲ್ಲಾ ಕಳಚಿ ಪೊದೆಗಳ ಮರೆಗೆ ಬಿಸಾಡಿದಳು. ಅಂಡರ್ ವೇರ್, ಬ್ರಾಸಿಯರ್ ಮಾತ್ರ ಇರಿಸಿಕೊಂಡಳು. ಅವುಗಳಮೇಲೆ ಗೌನ್ ಧರಿಸಿಕೊಂಡಳು. ಕ್ಷಣದಲ್ಲಿ ಮಿಸೆಸ್ ಡೇವಿಡ್‌ಳಂತೆ

ಸಿದ್ಧಳಾಗಿ ವ್ಯಾನ್‌ನಲ್ಲಿ ಮುಂದಿನ ಸೀಟಿನಲ್ಲಿ ಕುಳಿತುಕೊಂಡಳು.

ಸುಂದರ ಬಂದು ಅವಳನ್ನು ತನ್ನ ಪಕ್ಕಕ್ಕೆ ಎಳೆದುಕೊಂಡು ಡ್ರೈವಿಂಗ್ ಸೀಟಿನಲ್ಲಿ ಕುಳಿತನು.

ಮೈಕಲ್, ಜಾನ್, ಫರೀದರು ಹಿಂಬಾಗದಿಂದ ವ್ಯಾನಿನೊಳಕ್ಕೆ ಹತ್ತಿದರು.

ಐರನ್ ಬಾಕ್ಸ್ ಒಳಕ್ಕೆ ಎಳೆದುಕೊಂಡರು. ಆಗ ಇದ್ದಕ್ಕಿದಂತೆ ಐರನ್ ಬಾಕ್ಸಿನ ಒಂದು ಮೂಲೆ ಫರೀದನ ಕಾಲಿಗೆ ಬಡಿಯಿತು. "ಹಾಂ!" ಎಂದು ಫರೀದ್ ಕಾಲು ಹಿಡಿದುಕೊಂಡು ಕುಳಿತನು.

ಮೈಕಲ್ ಆಲೋಚಿಸತೊಡಗಿದನು.

ಜಾನ್‌ನ ಕಣ್ಣುಗಳು ಬೆಂಕಿಯ ಕೆಂಡಗಳಂತೆ ಉರಿಯುತ್ತಿದ್ದವು.

ಫರೀದ್ ಮುಂದೆ ಬರಲಿರುವ ಅಪಾಯವನ್ನು ಊಹಿಸಿಕೊಳ್ಳುತ್ತಾ, ಬಾಕ್ಸ್ ತಗುಲಿ ನೋಯುತ್ತಿದ್ದ ಕಾಲನ್ನು ಹಿಡಿದುಕೊಂಡು ಕುಳಿತಿದ್ದನು.

ಸುಂದರ ತನ್ನ ಜಾಣ್ಮೆಯಿಂದ ತಿರುವು ತಿರುಗಿಸುತ್ತಾ ಜೋರಾಗಿ ಡ್ರೈವ್ ಮಾಡುತ್ತಿದ್ದನು.

ಚಂಚಲಾ ಸುಂದರನನ್ನು ತನ್ನೆರಡು ಕೈಗಳಿಂದಲೂ ಬಳಸಿ ಅಪ್ಪಿಕೊಂಡು ತನ್ನ ತಲೆಯನ್ನು ಅವನ ಭುಜದ ಮೇಲೆ ಒರಗಿಸಿ ಆನಂದಪರವಶಳಾಗಿದ್ದಳು.

ಅವರ ಆಪರೇಷನ್ ಯಶಸ್ವಿಯಾಗಿ ನಡೆದು ಅರ್ಧ ಗಂಟೆಯಾಯಿತು.

ಆದರೆ ಟ್ರಕ್ ಸರಿಯಾಗಿ ಪ್ರಯಾಣ ಮಾಡಿದ್ದಿದ್ದರೆ ಈಗ್ಗೇ ಟ್ರಕ್ ಆ ಪ್ರಾಜೆಕ್ಟ್ ಬ್ರಾಂಚ್ ಟ್ರೆಜರಿ ಆಫೀಸಿಗೆ ಸೇರಬೇಕಾಗಿತ್ತು.

ಅಷ್ಟರಲ್ಲಿ ಟ್ರಕ್‌ನೊಳಗಿನ ವೈರ್‌ಲೆಸ್ ಸೆಟ್ಟಿಗೆ ಜೀವ ಬಂದಿತು.

ಮೈಕಲ್ ಅಪಾಯಕ್ಕೆ ಸಿಲುಕಿದೆವೆಂದು ಗ್ರಹಿಸಿದನು.

ಹೇಗಾದರೆ ಹಾಗಾಗಲೆಂದು ಕೂಡಲೇ ವೈರಲೆಸ್ ಸೆಟ್ಟಿನ ವೈರುಗಳನ್ನು ಕತ್ತರಿಸಿಹಾಕಿದನು.

# ಹದಿನಾಲ್ಕು

"ಈಗ ಏನು ಹೇಳುವಿ ರಜನಿ ! .... ಚಂಚಲಾದೇವಿ ನಿರ್ದೋಷಿಯೆಂದೇ ಹೇಳುವೆಯಾ ?"

— ಕೇಳಿದ ಪತ್ತೇದಾರ ರವಿಕಾಂತ.

"ಅವಳಲ್ಲಿ ಯಾವ ದೋಷವಿದೆಯೆಂಬುದು ನೀವು ಹೇಳುವ ಮಾತುಗಳಿಂದ ನನಗೆ ಸ್ವಲ್ಪವೂ ಅರ್ಥವಾಗುತ್ತಿಲ್ಲ."

— ರಜನಿ ಹೇಳಿದಳು.

"ಹೋಗಲಿ, ಮಿಕ್ಕ ವಿಷಯಗಳೆಲ್ಲಾ ಒಂದು ಕಡೆಯಿರಲಿ, ಅವಳು ಯಾರ ಕಣ್ಣಿಗೂ ಕಾಣದ ರೀತಿಯಲ್ಲಿ ಮಾಯವಾಗಿರುವ ಆಧಾರದಿಂದಲಾದರೂ ಅನುಮಾನಿಸಲು ಆಗುವದಿಲ್ಲವೆ ?"

"ಅನುಮಾನಿಸಬೇಕು. ಆದರೆ ಯಾವ ರೀತಿ ಅನುಮಾನಿಸಬೇಕೆಂದು ಹೇಳುತ್ತೇನೆ. ಅವಳ ಜೀವಿತವನ್ನು ನಿರಾಶೆಯಿಂದ ಮಾನಸಿಕ ಕ್ಷೋಭೆಗೆ ಗುರಿಮಾಡಿದ ಬಾಲಚಂದ್ರನ ಮೇಲಾಗಲಿ, ಅವಳ ಶರೀರವನ್ನು ಆಟದ ಸ್ಥಳವನ್ನಾಗಿ ಭಾವಿಸಿ ಅನುಭವಿಸಿದ ರಮೇಶನ ಮೇಲಾಗಲಿ ನನಗೆ ಸ್ವಲ್ಪವೂ ಗೌರವ ಭಾವನೆಗಳಿಲ್ಲ. ಅವರು ಹೇಳುವ ಆಧಾರಗಳಿಂದ ನಾವು ಚಂಚಲಾದೇವಿಯನ್ನು ದೋಷಿಯೆಂದು ಪರಿಗಣಿಸಲು ಅವಕಾಶಗಳಿಲ್ಲ. ಪಾಪ ! ಅವಳು ಎಲ್ಲಿರುವಳೋ ? ಯಾವ ಅಪಾಯದಲ್ಲಿ ಸಿಲುಕಿಕೊಂಡಿರುವಳೋ...?"

ನಿಟ್ಟುಸಿರುಬಿಟ್ಟಳು ರಜನಿ.

"ಈಗ ಅಲ್ಲವಾದರೂ, ಅವಳು ನಮ್ಮ ಕೈಗೆ ಸಿಕ್ಕಿ, ಅವಳು ನಡೆಸಿದ ಅಪರಾಧ ಬಹಿರಂಗಪಟ್ಟ ದಿನವಾದರೂ ಅವಳನ್ನು ಕುರಿತು ನಿನಗೆ ನಿಜ ವಿಷಯ ತಿಳಿಯದೇ ಇರದು."

"ಚಂಚಲಾಳನ್ನು ಬಂಧಿಸಿದ ಮೇಲೆ ಅವಳು ನಿರ್ದೋಷಿಯೆಂದು ನಿಮಗೆ ತಿಳಿಯದಿರಲಾರದು."

"ಚಂಚಲಾದೇವಿಯ ಮೇಲೆ ನಿನಗೆ ಇಷ್ಟು ಅಭಿಮಾನವಿದೆಯೆಂದು ಅವಳಿಗೆ ತಿಳಿದಿದ್ದರೆ ನೇರವಾಗಿ ಓಡಿ ಬಂದು ನಿನ್ನ ಶರಣು ಕೋರುತ್ತಿದ್ದಳೋ ಏನೋ....?"

— ಎಂದು ಹೇಳಿದ ರವಿಕಾಂತ.

"ಕೇವಲ ಅಭಿಮಾನವೇ ಅಲ್ಲ. ಅವಳಿಗೆ ಎಂತಹ ಅನ್ಯಾಯವೂ ನಡೆಯಲು ಸಾಧ್ಯವಿಲ್ಲ. ಅವಳ ಶರೀರದ ಮೇಲೆ ಇನ್ನು ಮೇಲೆ ಒಂದು ಸೊಣವೂ ಕೂರಲೂ ಸಾಧ್ಯವಿಲ್ಲ. ಅವಳನ್ನು ರಕ್ಷಿಸಲು ಸರ್ವ ಸನ್ನದ್ಧಳಾಗಿದ್ದೇನೆ ನಾನು."

— ಎಂದು ರೋಷದಿಂದ ಹೇಳಿದಳು ರಜನಿ.

"ಗುಡ್. ಬಹಳ ಚೆನ್ನಾಗಿದೆ. ಇದಾವುದೋ ರಾಮಾಂಜನೇಯ ಯುದ್ಧ ಸೂಚಕವಾಗಿ ತೋರುತ್ತಿದೆ. ಆ ಪಂಚರಂಗಿ ಗಿಳಿಗಾಗಿ ನಮ್ಮಿಬ್ಬರ ಮಧ್ಯ ಬಹಳ ರಾದ್ಧಾಂತ ನಡೆಯುವಂತೆ ತೋರುತ್ತಿದೆ."

"ಈ ರೀತಿ ಇರುವುದಕ್ಕಿಂತಲೂ ಆ ರೀತಿ ರಾದ್ಧಾಂತ ಮಾಡಿಕೊಂಡು ಇರುವುದೇ ಬೆಟರ್!"

"ಹಾಗಾದರೆ ಇಬ್ಬರೂ ಚಾಲೇಂಜ್ ಮಾಡೋಣವೇ?"

— ಎಂದು ನಗುತ್ತಾ ಕೇಳಿದ ರವಿಕಾಂತ.

"ಅದು ನಿಮ್ಮ ಇಷ್ಟ."

ಸಿಡುಕಿನಿಂದ ಹೇಳಿದಳು ರಜನಿ.

"ರಜನಿ! ಈಗ ನೀನು ಅದೆಷ್ಟು ಮುದ್ದಾಗಿ ಕಾಣಿಸುತ್ತಿರುವೆಯೋ? ನಿನ್ನ ಈ ಮುದ್ದಿನ ಮನಮೋಹಕ ಸೌಂದರ್ಯವನ್ನು ವರ್ಣಿಸಲೇ?"

"ಬೇಕಾಗಿಲ್ಲ. ನನ್ನ ಬಳಿ ನಾಟಕ ಆಡಬೇಡಿ. ನನಗೆ ತಿಳಿದಿದೆ ನಿಮ್ಮ ಉಪಾಯವೆಲ್ಲಾ."

"ಸರಿ ! ಹಾಗಾದರೆ ಊಟ ಮಾಡಿ ನಮ್ಮ ಪತ್ತೇ ಕಾರ್ಯಕ್ಕೆ ತೆರಳೋಣವೇ ?"

"ಆಗಬಹುದು !...."

ಎಂದು ಅಡಿಗೆ ಮನೆಯ ಕಡೆ ನಡೆದಳು ರಜನಿ.

ಡೈನಿಂಗ್ ಟೇಬಲ್ಲಿಗೆ ಆ ಕಡೆ - ಈ ಕಡೆ ಕುರ್ಚಿಗಳಲ್ಲಿ ಕುಳಿತುಕೊಂಡರು. ಅಡಿಗೆಯ ಪಾರ್ವತಿ ಬಡಿಸುತ್ತಿದ್ದರೆ ಇಬ್ಬರೂ ತಿನ್ನತೊಡಗಿದರು. ಒಬ್ಬರನ್ನೊಬ್ಬರು ಸಿಡುಕಿನಿಂದ ಓರೆನೋಟಗಳಿಂದ ನೋಡಿಕೊಳ್ಳುತ್ತಿದ್ದ ರವಿಕಾಂತ. ರಜನಿಯರನ್ನು ಗಮನಿಸಿ, ತನ್ನಲ್ಲೇ ತಾನೇ ನಕ್ಕಳು ಪಾರ್ವತಿ.

ಊಟ ಮುಗಿಯಿತು. ಡ್ರಾಯಿಂಗ್ ರೂಮಿನಲ್ಲಿ ಇಬ್ಬರೂ ಕುಳಿತರು.

"ಡಿಯರ್ !.... ಅನಾವಶ್ಯಕವಾದ ಆಲೋಚನೆ ಮಾಡದೆಯೇ ನಾನು ಹೇಳುವುದನ್ನು ಸ್ವಲ್ಪ ಶಾಂತವಾಗಿ ಆಲಿಸುವಿರಾ ?"

— ಎಂದು ಶಾಂತತೆಯಿಂದ ಕೇಳಿದಳು ರಜನಿ.

"ಹೇಳು !"

ನಗುತ್ತಾ ನುಡಿದ ರವಿಕಾಂತ.

"ಫೈವ್ ಸ್ಟಾರ್ಸ್ ಹೋಟಲಿಗೆ ಒಂದು ಕಳ್ಳರ ಕೂಟ ನುಗ್ಗಿತು. ಬೆದರಿಕೆ ಹಾಕಿ ಡ್ಯಾನ್ಸ್ ಹಾಲಿನಲ್ಲಿ ಕಸ್ಟಮರ್ಸ್ ಬಳಿಯಿಂದ ಪರ್ಸ್ ಅಪಹರಿಸಿಕೊಂಡು ಹೋದರು. ಇವಕ್ಕೆ ನಾಯಕತ್ವ ವಹಿಸಿದ್ದವಳು ಓರ್ವ ಸ್ತ್ರೀ. ಅಲ್ಲವೇ?"

"ಹೌದು ಅವಳೇ ಚಂಚಲಾದೇವಿ"

"ಹಾಗಾದರೆ ಅವಳೊಂದಿಗೆ ಇದ್ದ ದರೋಡೆಗಾರರು ಎಲ್ಲಿ ಹೋದರು ಅವರ ಪರಿಚಯ ಆಕೆಗೆ ಹೇಗೆ ಆಯಿತು ತಿಳಿಸುವಿರಾ?"

"ಅದನ್ನೇ ನಾನು ಪತ್ತೇಮಾಡುವದಕ್ಕೆ ಶ್ರಮಿಸುತ್ತಿದ್ದೇನೆ ಎಂದು ಹೇಳಲಿಲ್ಲವೇ?"

"ಆಗಲಿ. ನಾನು ಸಹ ಬೇರೆ ರೀತಿಯಲ್ಲಿ ಪತ್ತೆ ಮಾಡುತ್ತೇನೆ"

—ಎಂದು ಮೇಲಕ್ಕೆದ್ದಳು ರಜನಿ.

# ಹದಿನೈದು

ಅಮೀರ್ ರೌಡಿ ಜೊತೆಗೆ ವಸ್ತಾದಿಯಾದ ರೌಡಿ!

ಅವನು ಒಳ್ಳೆಯುವರಿಗೆ ಒಳ್ಳೆಯುವನೆಂದೂ, ಕೆಟ್ಟವರಿಗೆ ಕೆಟ್ಟವನೆಂದು ಪ್ರಸಿದ್ಧಿ ಪಡೆದವನು. ವಿಜಯಪುರದಲ್ಲಿ ಅವನು ಹೆಸರು ಕೇಳದ ವ್ಯಕ್ತಿ ಯಾರೂ ಇರಲಿಲ್ಲ.

ಇಪ್ಪತ್ತೆರಡು ವರ್ಷಗಳ ಅಮೀರ್ ಪೈಲ್ವಾನನಂತೆ ಇದ್ದನು. ಹೆಲನ್ ಸರ್ಕಲ್ಲಿನಲ್ಲಿ ಅವನದು ಒಂದು ಸೈಕಲ್ ಷಾಪಿದೆ. ಅಲ್ಲಿ ಸೈಕಲ್ ರಿಪೇರಿ ಮಾಡಲ್ಪಡುತ್ತವೆ. ಆಗಾಗ್ಗೆ ಕೆಲವರ ಬ್ರೆಯಿನ್‌ಗಳನ್ನೂ ಓರಾಯಿಲ್ ಮಾಡಿದ ಸಂದರ್ಭಗಳುಂಟು.

ಹೆಸರಿಗೆ ಸೈಕಲ್ ಷಾಪೇ ಹೊರತು ಅವನ ಅಂಗಡಿಯಲ್ಲಿ ವಿವಿಧ ಪುಸ್ತಕಗಳೂ ಸಹ ಲಭಿಸುತ್ತವೆ. ಅಮೀರನಿಗೆ ಐದಾರು ಭಾಷೆಗಳು ಬರುತ್ತಿದ್ದವು. ಅವನ ಷಾಪಿನಲ್ಲಿ ಅನೇಕ ಭಾಷೆಗಳ ಪತ್ತೇದಾರಿ ಕಾದಂಬರಿಗಳು ಲಭಿಸುತ್ತವೆ. ಕಾದಂಬರಿಗಳನ್ನು, ಸೈಕಲ್‌ಗಳನ್ನು ಬಾಡಿಗೆಗೆ ಕೊಡುತ್ತಿರುತ್ತಾನೆ.

ಕಾದಂಬರಿಗಳನ್ನು ತಾನೂ ಓದುತ್ತಲಿದ್ದನು. ಅನೇಕ ವಿಷಯ ಅರ್ಥ ಮಾಡಿಕೊಳ್ಳುತ್ತಲೂ ಇದ್ದನು. ಕಾದಂಬರಿಗಳಲ್ಲಿ ಅನೇಕ ಮುಖ್ಯವಾದ ಅಂಶಗಳನ್ನು ಗುರುತಿಸಿಟ್ಟುಕೊಳ್ಳುತ್ತಿದ್ದನು. ಪತ್ತೇದಾರಿ ಕಾದಂಬರಿಗಳೆಂದರೆ ಅವನಿಗೆ ಬಹಳ ಇಷ್ಟ.

ಅವನು ಮುಸ್ಲಿಮ್ ಅಲ್ಲ. ಅವನಿಗೆ ಯಾವುದೋ ಬೇರೆ ಹೆಸರಿತ್ತು ಆದರೆ ಅವನಿಗೆ ಭಾಷಾ ದುರಭಿಮಾನಿಗಳ ಮೇಲೆ ಬಹಳ ಅಸಹ್ಯವಿತ್ತು. ಅದ ದರಿಂದಲೇ ತನ್ನ ಹೆಸರನ್ನು 'ಅಮೀರ್' ಎಂದು ಬದಲಿಸಿಕೊಂಡನು. ಎಲ್ಲರೂ ಅವನನ್ನು ಅಮೀರ್ ಎಂದು ಕರೆಯುವುದರಿಂದ ಮಹಮ್ಮದೀಯನೆಂದು ತಪ್ಪು ಕಲ್ಪನೆ ಮಾಡಿಕೊಳ್ಳಬಹುದು.

ಭಾನುವಾರ ಮಧ್ಯಾಹ್ನದ ಮೇಲೆ ಅವನು ಷಾಪು ಮುಚ್ಚಿಬಿಡುತ್ತಲಿದ್ದನು. ನಾಲ್ವರು ಕೆಲಸದವರಿಗೂ ತಲೆಗೆ ಐದು ರೂಪಾಯಿಗಳಂತೆ ಕೊಟ್ಟು ಜಲ್ಸಾ ಮಾಡಿಕೊಳ್ಳುವಂತೆ ಹೇಳುತ್ತಲಿದ್ದ.

ಆ ದಿನ ಭಾನುವಾರ ಆರುಗಂಟೆಗೇ ಬಾರ್‌ಗೆ ಹೊರಟು ವಿಸ್ಕಿ ತಲೆಗೇರುವವರೆಗೂ ಕುಡಿದನು. ಹೋಟಲಿನವರೆಲ್ಲಾ ಅವನಿಗೆ ತಿಳಿದವರೇ ಆಗಿದ್ದರು.

"ಒಳ್ಳೇ ಜಲ್ಸಾ ಮಾಲು ಬೇಕು."

"ಫಾರೀನ್ ಡೋಲು ಬೇಕೋ. ಇಂಡಿಯನ್ ಡೋಲು ಬೇಕೋ ಗುರು?"

ನಗುತ್ತಾ ಕೇಳಿದ ಅಸಿಸ್ಟೆಂಟ್ ಮ್ಯಾನೇಜರ್.

"ಯಾವ ಡೋಲಾದರೂ ಪರವಾಗಿಲ್ಲ. ಸರಿಯಾಗಿ ಮೊಳಗಿದರೆ ಸಾಕು."

—ಹೇಳಿದ ಅಮೀರ್.

ಸರಿಯಾಗಿ ಮೊಳಗದಿದ್ದರೆ ಸೈಕಲ್ ಚೈನಿನಿಂದ ತನಗೆ ಪೂಜೆ ನಡೆಯುತ್ತದೆಂಬುದು ಅವನಿಗೆ ತಿಳಿದಿತ್ತು. ಅಪಶೃತಿ ಮೊಳಗಿದ್ದರಿಂದ ಸೈಕಲ್ ಚೈನಿನ ಏಟುಗಳು ತಿಂದದ್ದು ಅಸಿಸ್ಟೆಂಟ್ ಮ್ಯಾನೇಜರನಿಗೆ ಜ್ಞಾಪಕವಿದ್ದೇ ಇತ್ತು.

ಅಸಿಸ್ಟೆಂಟ್ ಮ್ಯಾನೇಜರ್ ಮೇಲಕ್ಕೆದ್ದನು. ಅಮೀರ್ ಅವನನ್ನು ಹಿಂಬಾಲಿಸಿದನು. ಅ॥ ಮ್ಯಾನೇಜರ್ ಅವನನ್ನು 515ನೇ ನಂಬರ್ ಕೊಠಡಿಯಲ್ಲಿ ಕುಳ್ಳಿರಿಸಿದನು.

ಆ ಹೋಟಲಿನಲ್ಲಿ ಅಷ್ಟೊಂದು ಕೊಠಡಿಗಳು ಇರಲಿಲ್ಲ. ಆ ಹೋಟಲ್ ಕೊಠಡಿಗಳಿಗೆ 501 ರಿಂದ ನಂಬರುಗಳು ಪ್ರಾರಂಭಿಸಿದ್ದರು. ಬಹಳ ಹೋಟಲುಗಳಲ್ಲಿ ಅದೇ ರೀತಿಯಿರುತ್ತದೆ.

"ಎರಡು ನಿಮಿಷಗಳಲ್ಲಿ ನಿಮ್ಮ ಮನ ಒಪ್ಪುವ ಡೋಲನ್ನು ಕರೆತರುತ್ತೇನೆ ಕುಳಿತಿರಿ"

—ಎಂದು ನಮಸ್ಕರಿಸಿ ಹೊರಬಂದ ಅ॥ ಮ್ಯಾನೇಜರ್.

ಸರಿಯಾಗಿ ಎರಡು ನಿಮಿಷಗಳಲ್ಲಿ ಒರ್ವ ಆಂಗ್ಲೋ ಇಂಡಿಯನ್ ಸುಂದರಿಯನ್ನು ಕರೆತಂದು—

"ಫಾರೀನ್ ಬ್ಯೂಟಿ ಮೊನ್ನೆ ತಾನೇ ಬಂದಳು"

ಆ ಫಾರೀನ್ ಬ್ಯೂಟಿಗೆ ಬಿಜಿನೆಸ್ ಚೆನ್ನಾಗಿ ತಿಳಿದಂತಿತ್ತು. ಸ್ವಲ್ಪ ಮಾತ್ರವೂ ತಡಮಾಡದೆ ಅವನ ಕೊರಳಿಗೆ ತನ್ನ ಕೈಗಳು ಬಳಸಿದಳು.

ಅಮಿರಾಂನಿಗೆ ಮಹದಾನಂದವಾಯಿತು. ಅವಳ ಮೃದು ಮಧುರ ಕೋಮಲ ಶರೀರವನ್ನು ಆವೇಶದಿಂದ ತನ್ನೆಡೆಗೆ ಬಿಗಿಯಾಗಿ ಅಮುಕಿಕೊಂಡ.

ಇಬ್ಬರೂ ನಗ್ನರಾಗಿ ಮಂಚದ ಹಾಸಿಗೆಮೇಲೆ ಸೇರಿದರು. ಐದು ನಿಮಿಷಗಳು ಉರುಳಿದವು

"ಡರ್ಟೀ ರೋಗ್ಸ್. ಬಸ್ಟರ್ಸ್"

ಎಂದು ಓರ್ವ ಸ್ತ್ರೀಯಳ ಕೂಗು, ಕಿರಿಚಾಟ, ನರಳಾಟ ಆನಂದಸಾಗರದಲ್ಲಿ ಈಜಾಡುತ್ತಿದ್ದ ಅಮಿರಾರನ ಕಿವಿಗಳಿಗೆ ಬಿದ್ದು ಬೆಚ್ಚಿ ಬಿದ್ದನು.

ಅವನನ್ನು ಸ್ತ್ರೀಯರ ಆಲಾಪನೆ, ರೋದನೆಗಳು ಹುಚ್ಚನನ್ನಾಗಿಸುತ್ತವೆ. ಅಷ್ಟೇ ಅಲ್ಲ ಅವನು ನಿಶೆಯಿಂದಇದ್ದರೆ ಆ ನಿಶೆ ಇದ್ದಕ್ಕಿದ್ದಂತೆ ಇಳಿದುಹೋಗುತ್ತದೆ.

ಈಗಲೂ ಸಹ ಅದೇ ರೀತಿ ನಡೆಯಿತು

ತನ್ನ ಎದೆಯ ಮೇಲೊರಗಿದ ಫಾರೀನ್ ಬಳ್ಳಿಯನ್ನು ಪಕ್ಕಕ್ಕೆ ನೂಕಿ ಲುಂಗಿ ಸರಿಯಾಗಿ ಸುತ್ತಿಕೊಂಡು ಕೊಠಡಿಯ ಬಾಗಿಲುಗಳು ತೆರೆದು ಹೊರಬಂದನು. ಆ ನರಳಾಟ, ಕಿರುಚಾಟ ಪಕ್ಕದ ಕೊಠಡಿಯೊಳಗಿನಿಂದ ಬರುತ್ತಿತ್ತು.

ಎದುರಿಗೆ ಅಸಿಸ್ಟೆಂಟ್‌ಮ್ಯಾನೇಜರ್ ನಗುತ್ತಾ ನಿಂತಿದ್ದನು.

"ಯಾರು ಆ ಹುಡುಗಿ ? ಏನಾಯಿತು ?"

—ಎಂದು ಕೇಳಿದ ಅಮಿರಾರ್.

"ಗುರು ಕೋಪಿಸಿಕೊಳ್ಳಬೇಡ ಕೆಲ ಫಾರೀನ್ ಡೋಲುಗಳು ಆನಂದ ಹೆಚ್ಚಾದರೆ ಅದೇ ರೀತಿ ಬಾಯಿಗೆ ಬಂದಂತೆ ಬಯ್ಯುತ್ತಾ ಕಿರುಚುತ್ತಿರುತ್ತವೆ. ನೀವು ಅವುಗಳಾವನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ನೀವು ಆ ಫಾರೀನ್ ಬ್ಯೂಟಿಯೊಂದಿಗೆ ಜಲ್ಸಾ ಮಾಡಿ ಹೋಗಿ"

ಅಮಿರಾರ್ ಅವನ ಮಾತು ಲೆಕ್ಕಿಸದೆ ಪಕ್ಕದ ಕೊಠಡಿಯ ಬಾಗಿಲು

ಜೋರಾಗಿ ನೂಕಿದಾಗ ಎದುರಿಗೆ ಕಂಡು ಬಂದ ಹೃದಯ ವಿದ್ರಾವಕ ದೃಶ್ಯ ನೋಡಿ ಕೋಪದಿಂದ ಉಗ್ರನಾದನು.

ಚಂಚಲಾದೇವಿ ಆ ಕೊಠಡಿಯ ನೆಲದಮೇಲೆ ಸಂಪೂರ್ಣ ನಗ್ನಳಾಗಿ ಬಿದ್ದಿದ್ದಳು. ನಾಲ್ವರು ವ್ಯಕ್ತಿಗಳು ಅವಳ ಶರೀರದಮೇಲೆ ನಾಯಿಗಳಂತೆ ಬಿದ್ದರು.

ಅವರ ಉಗುರುಗಳ ಗೀರಾಟದಿಂದ ಅವಳ ಶರೀರ ಅಲ್ಲಲ್ಲಿ ರಕ್ತವನು ಹೊರಚಿಮ್ಮುತ್ತಿತ್ತು.

ಆ ರಕ್ತದ ಕಲೆಗಳು ಅವಿನಾಶನನ್ನು ಪಶುವಿನಂತೆ ಮಾಡಿದವು.

ಒಳಗಡೆಗೆ ಹೋದದ್ದು, ಆ ನಾಲ್ವರು ದಾಂಢಿಗರನ್ನೂ ಭೀಮನಂತೆ ಒದ್ದು ಮುದ್ದೆ ಮಾಡಿದ್ದು, ಕ್ಷಣಿಕ ದೃಶ್ಯಗಳಂತೆ ಎಲ್ಲವೂ ಸರ ಸರನೆ ನಡೆದು ಹೋದವು.

ಚಂಚಲಾದೇವಿಯ ಕಣ್ಣುಗಳಿಂದ ಬಳಬಳನೆ ನೀರು ಸುರಿಯುತ್ತಿತ್ತು ದಿಕ್ಕಾಪಾಲಾಗಿ ಬಿದ್ದಿದ್ದ ವಸ್ತ್ರ ತೆಗೆದುಕೊಂಡು ತನ್ನ ನಗ್ನ ಶರೀರವನ್ನು ಮರೆ ಮಾಡಿಕೊಂಡಳು. ಮಾತುಗಳು ಕಂಠದಿಂದ ಹೊರಬಾರದೆ ಕೃತಜ್ಞತಾ ಭಾವ ದಿಂದ ಅವಿನಾಶನಕಡೆ ನೋಡಿದಳು.

"ನಿಮಗೆ ಇನ್ನು ಯಾವ ಅಪಾಯವೂ ಸಂಭವಿಸುವುದಿಲ್ಲ. ನನ್ನ ಜೊತೆ ಯಲ್ಲಿ ನೀವು ಬನ್ನಿ"

—ಎಂದು ಹೇಳಿ ಹೊರಗೆ ಬಂದ ಅವಿನಾಶ.

ಅವಳಮೇಲೆ ಪಶುಗಳಂತೆ ಬಿದ್ದು ಶೀಲಾಪಹರಣ ಮಾಡಲು ಸಿದ್ಧರಾದ ಆ ನಾಲ್ವರು ದಾಂಢಿಗರು ಗಾಳಿ ಮಳೆಗೆ ಮುರಿದು ನೆಲ ಕಚ್ಚಿಕೊಂಡ ಮರದ ರೆಂಬೆಗಳಂತೆ ಬಿದ್ದಿದ್ದರು.

ತನ್ನ ಕೊಠಡಿಯಲ್ಲಿ ತನಗಾಗಿ ಕಾಯುತ್ತಿದ್ದ ಫಾರೀನ್ ಬ್ಯೂಟಿಗೆ ಎರಡು ಹತ್ತು ರೂಪಾಯಿಗಳ ನೋಟು ಕೊಟ್ಟು, ಚಂಚಲಾದೇವಿಯೊಂದಿಗೆ ಹೋಟೆ ಲಿನಿಂದ ಹೊರಗೆ ಬಂದು ನಿಂತುಕೊಂಡನು ಅವಿನಾಶ.

ಒಂದು ಟ್ಯಾಕ್ಸಿ ಬಂದು ಅವನ ಮುಂದೆ ನಿಂತಿತು.

ಅವಿನಾಶ್ ಅವಳನ್ನು ಹಿಂದುಗಡೆ ಹತ್ತಿಸಿದನು. ತಾನು ಡ್ರೈವರ್ ಪಕ್ಕದಲ್ಲಿ ಕುಳಿತನು.

ಟ್ಯಾಕ್ಸಿ ಸುಮಾರು ಅರ್ಧಮೈಲಿ ದೂರದಲ್ಲಿದ್ದ ಅನಿಲಾನ ಮನೆಯ ಬಳಗೆ ಐದು ನಿಮಿಷಗಳಲ್ಲಿ ಬಂದು ನಿಂತಿತು.

"ಈ ಮನೆಯಲ್ಲಿ ನನ್ನ ಆಜ್ಞೆಯಿಲ್ಲದೆ ಒಂದು ಇರುವೆಯೂ ಪ್ರವೇಶಿಸಲು ಅವಕಾಶವಿಲ್ಲ. ನಡೆದುದೆಲ್ಲವನ್ನೂ ಮರೆತು ಸುಖವಾಗಿ ಸ್ನಾನಮಾಡಿ ಮಲಗಿಕೊಳ್ಳಿ. ತಿನ್ನಲು ಬೇಕಾದ ಎಲ್ಲಾ ಪದಾರ್ಥಗಳೂ ಒಳಗಡೆಯೇ ಇವೆ. ನಾನು ಒಂದು ಗಂಟೆಯೊಳಗಾಗಿ ಬಂದು ಬಿಡುತ್ತೇನೆ.

—ಎಂದು ಹೇಳಿ ಹೊರಬಂದು ಬಾಗಿಲು ಮುಚ್ಚಿ, ಬೀಗಹಾಕಿ, ಬೀಗದ ಕೈ ಕಿಸೆಗೆ ಸೇರಿಸಿಕೊಂಡು ಮತ್ತೆ ಅದೇ ಟಾಕ್ಸಿ ಹತ್ತಿದನು. ನಡೆದ ಘಟನೆ ಬಗ್ಗೆ ಮಂಗಳ ಹಾಡಲು ಮತ್ತೆ ಹೋಟೆಲ್ ಲೌಲಿಯ ಕಡೆಗೆ ಹೊರಟ. ಅಲ್ಲಿ ಯುವರಿಗೂ ತಿಳಿದಿತ್ತು-ಅನಿಲ್ ಮತ್ತೆ ಬರುವನೆಂಬ ವಿಷಯ.

## ಹದಿನಾರು

"ಸಾಧ್ಯವಿಲ್ಲ. ಸೆಪ್ಟಿಕ್ ಆಗಿದೆ. ಡಾಕ್ಟರ್‌ಗೆ ತೋರಿಸಬೇಕು."

ಫರೀದನ ಬಲಗಾಲಿನ ಕಡೆಗೆ ನೋಡುತ್ತಾ ಹೇಳಿದ ಸುಂದರ.

ದರೋಡೆಯ ಸಮಯದಲ್ಲಿ ಅಕಸ್ಮಾತ್ತಾಗಿ ಬಾರ್ಸ್ ತಗುಲಿದ ಪ್ರಯುಕ್ತ ಫರೀದನ ಕಾಲು ಊದಿಕೊಂಡಿತ್ತು. ಮೊಣಕಾಲಿನ ಕೆಳಭಾಗದಲ್ಲಿ ಬ್ಯಾಂಡೇಜ್ ಕಟ್ಟಲ್ಪಟ್ಟಿತ್ತು.

"ಸೆಪ್ಟಿಕ್ ಆಗಿರುವುದು ಕಾಲಿಗೆ. ಕೆಲಸ ಮಾಡುವುದು ಕೈಯಿಂದ. ನೀವು ಏತಕ್ಕೆ ಗಾಭರಿ ಪಡುತ್ತಿರುವಿರೋ ನನಗೆ ಅರ್ಥವೇ ಆಗುತ್ತಿಲ್ಲ."

—ಎಂದು ಹೇಳಿದ ಜಾನ್.

"ನೀನು ಮನುಷ್ಯನೋ....ಪಶುವೋ? ಕೆಲಸ ಮಾಡಬೇಕಾದ ವ್ಯಕ್ತಿ ಪ್ರಾಣಾಪಾಯದಲ್ಲಿ ನರಳುತ್ತಿದ್ದರೆ ನಿನಗೆ ಹಾಸ್ಯಾಸ್ಪದವಾಗಿ ತೋರುತ್ತಿವೆಯೇನು?"

ಕೋಪದಿಂದ ಕಣ್ಣರಳಿಸಿ ಕೇಳಿದ ಸುಂದರ.

"ಬೇಕಾದರೆ ಡಾಕ್ಟರ್ ಬಳಿಗೆ ಹೋಗಿ ಯಾವ ಅಪರೇಷನ್ ಬೇಕಾದರೂ ನಾನು ಮಾಡಿಸಿಕೊಳ್ಳುತ್ತೇನೆ. ಆದರೆ ಫರೀದ್ ಈ ಕೆಲಸ ಬಿಟ್ಟು ಹೋಗಲು ಸಾಧ್ಯವಿಲ್ಲ. ಆದುದರಿಂದ ಮಹಾಲಕ್ಷ್ಮಿಯನ್ನು ಕಣ್ಣಾರೆ ಕಂಡು ವರಿಸಬೇಕಾದ ಈ ಮಹಾಯಜ್ಞದಲ್ಲಿ ಇಂತಹ ಚಿಕ್ಕ ತ್ಯಾಗಗಳು ಸಂಭವಿಸಬಹುದು."

ಜಾನ್ ಹಾಸ್ಯದಿಂದ ನಕ್ಕು ನುಡಿದ.

"ಜಾನ್!...."

ಆವೇಶದಿಂದ ಸುಂದರನ ಹಿಡಿಗಳು ಬಿಗಿದುಕೊಂಡವು.

"ನಿಮ್ಮ ಮನಸ್ಸು ನನಗೆ ಚೆನ್ನಾಗಿ ಅರ್ಥವಾದವು. ಹಣಕ್ಕಿಂತಲೂ ಫರೀದ್ ಮುಖ್ಯವೆಂದು ಹೇಳುತ್ತಾನೆ ಸುಂದರ. ಮನುಷ್ಯನಿಗಿಂತಲೂ ಹಣವೇ ಪ್ರಾಧಾನ್ಯವೆಂದು ಹೇಳುತ್ತಾನೆ ಜಾನ್. ಹಣ ಹೋದರೆ ಮತ್ತೆ ಸಂಪಾದಿಸಬಹುದೆಂದು ಸುಂದರನ ಉದ್ದೇಶ. ಹಣದಿಂದ ಫರೀದ್‌ರಂತಹ ಹತ್ತು ಮಂದಿಯನ್ನು ಕೊಳ್ಳಬಹುದೆಂದು ಜಾನ್‌ನ ನಂಬಿಕೆ. ಅವರವರಿಗೆ ಅವರ ಉದ್ದೇಶಗಳು ಒಳ್ಳೆಯವೇ ಆಗಿರಬಹುದು, ನನ್ನ ಅಭಿಪ್ರಾಯವನ್ನು ಸಹ ಹೇಳುತ್ತೇನೆ ಕೇಳಿ"

—ಎಂದು ಹೇಳಿ ಎಲ್ಲರ ಮುಖಗಳನ್ನೂ ಒಂದುಸಾರಿ ನೋಡಿದಳು ಚಂಚಲಾದೇವಿ.

"ಹೇಳು!" ಎಂಬಂತಿದ್ದವು ಎಲ್ಲರ ಮುಖಗಳೂ.

"ಫರೀದ್‌ಗೆ ಚಿಕಿತ್ಸೆ ನಡೆಸಲೇಬೇಕು. ಹಾಗೆಂದು ಹೊರಗೆ ಹೋಗಿ ಡಾಕ್ಟರನ್ನು ನೋಡಲು ಅವಕಾಶವಿಲ್ಲ. ನಮ್ಮ ಕೊರಳಿಗೆ ನಾವೇ ಉರುಲು ಹಾಕಿಕೊಂಡಂತಾಗುತ್ತದೆ. ಇದಕ್ಕೆ ಒಂದೇ ಒಂದು ಮಾರ್ಗವಿದೆ. ಡಾಕ್ಟರನ್ನು ನಮ್ಮ ಬಳಿಗೆ ಕರೆಸಿಕೊಳ್ಳುವುದು.

"ಚೆನ್ನಾಗಿದೆ. ಅದರಿಂದ ಅಪಾಯವಿಲ್ಲವೇ?"

"ಅಪಾಯದಿಂದ ತಪ್ಪಿಸಿಕೊಳ್ಳಲೂ ಒಂದು ಮಾರ್ಗವಿದೆ ಆ ಡಾಕ್ಟರನ್ನೂ ನಮ್ಮಲ್ಲಿ ಒಬ್ಬ ಭಾಗಸ್ಥನನ್ನಾಗಿ ಮಾಡಿಕೊಳ್ಳುವುದು"

"ಆಂ...."

ಆಶ್ಚರ್ಯದಿಂದ ಬಾಯಿ ತೆರೆದರು ಜಾನ್ ಮತ್ತು ಮೈಕಲ್.

"ನಮ್ಮ ಕೂಟದಲ್ಲಿ ಯಾರಿಗಾದರೂ ಆಕಸ್ಮಿಕವಾಗಿ ಇಂತಹ ಪರಿಸ್ಥಿತಿ ಬರುತ್ತವೆಂದು, ನಾವು ಮೊದಲೇ ಊಹಿಸಿರಲಿಲ್ಲ. ಓರ್ವ ಡಾಕ್ಟರನನ್ನು ನಮ್ಮ ಕೂಟಕ್ಕೆ ಸೇರಿಸಿಕೊಳ್ಳದೇ ತಪ್ಪು ಮಾಡಿದೆವು. ಈಗ ಸೇರಿಸಿಕೊಳ್ಳಲೇಬೇಕಾದ ಪರಿಸ್ಥಿತಿ ಒದಗಿ ಬಂದಿದೆ. ಫರೀದ್ ಜೀವಂತನಾಗಿ ಇರಬೇಕೆಂದರೆ, ಟ್ರಿಕ್‌ನ್ನು ಬೇಧಿಸಬೇಕೆಂದರೆ ಡಾಕ್ಟರೊಬ್ಬ ಬೇಕೇ ಬೇಕು."

ಚಂಚಲಾದೇವಿಯ ಮಾತುಗಳಿಗೆ ಯಾವ ರೀತಿ ಉತ್ತರ ಹೇಳಬೇಕೆಂದು ಯಾರಿಗೂ ತೋರಲಿಲ್ಲ.

"ನಾವು ಆಲೋಚಿಸದೇ ಬಿಟ್ಟಿದ್ದ ಕೆಲ ವಿಷಯ ಈಗ ನಮಗೆ ಸಮಸ್ಯೆಗಳಾಗಿವೆ. ಫರೀದನ ಸ್ಥಿತಿ ಬಹಳ ಅಪಾಯ ಸ್ಥಿತಿಗೆ ಬಂದಿದೆ. ಯಾರಿಗಾದರೂ ದರೋಡೆಯ ಸಮಯದಲ್ಲಿ ಗಾಯಗಳಾದರೆ, ಅದರಿಂದ ಪ್ರಾಣ ಕಳೆದುಕೊಂಡರೆ, ಎಂಬ ವಿಷಯಗಳು ಮೊದಲು ಯಾರೂ ಊಹಿಸಲಿಲ್ಲ. ಈಗ ಊಹಿಸಿ ಪ್ಲಾನ್ ಹಾಕಬೇಕು. ಬೇರೆ ಮಾರ್ಗವೇ ಇಲ್ಲ."

— ಎಂದು ಹೇಳಿದಳು ಚಂಚಲಾ.

"ನಾನು ಹೇಳಿದ್ದು ನಿಮ್ಮೆಲ್ಲರಿಗೂ ಒಪ್ಪಿಗೆಯಾಯಿತೇ ?"

"ಎಲ್ಲರಿಗೂ ವೇದನೆ ಇದ್ದೇ ಇವೆ. ಆದರೂ ಅನುಭವಿಸದೇ ಇರಲು ಸಾಧ್ಯ ಇಲ್ಲ. ಮದುವೆಯಾಗದೇ ಇದ್ದರೂ ಪತಿ ಪತ್ನಿಯರಾಗಿ – ನಟಿಸುತ್ತಾ ಸುಂದರ, ಚಂಚಲಾದೇವಿಯರಿಬ್ಬರೂ ಆನಂದವಾಗಿದ್ದಾರೆ."

— ಎಂದು ಹೇಳಿದ ಜಾನ್.

"ಅದೆಲ್ಲಾ ಈಗ ಬೇಡ. ಸದ್ಯಕ್ಕೆ ನಮಗೆ ಬೇಕಾಗಿರುವುದು ಡಾಕ್ಟರ್. ಅದರಲ್ಲಿಯೂ ನಮಗೆ ತಕ್ಕ ಡಾಕ್ಟರ್. ಸಿಗದೇ ಇರುವುದೂ ಸಾಧ್ಯವೇನಲ್ಲ."

— ಎಂದು ಹೇಳಿದಳು ಚಂಚಲಾ.

ಸುಂದರನ ಪರಿಸ್ಥಿತಿ ತೀರಾ ಹದಗೆಟ್ಟಿತ್ತು. ಯಾರ ಕಣ್ಣಿಗೂ ಕಾಣದೆ ಸ್ಯಾನಿಟೋರಿಯಂನೊಳಗಡೆಯೇ ಇರಬೇಕಾದ ಕಳ್ಳಜೀವನ ಅವನಿಗೆ ಸಾಕು ಸಾಕಾಗಿತ್ತು.

ಚಂಚಲಾದೇವಿಯಂಥಹ ಪ್ರೇಯಸಿ ಇದ್ದುಕೊಂಡು ಸಹ ಎಟುಕಿಸಿಕೊಳ್ಳಲು ಅವಕಾಶಗಳಿಲ್ಲದೆ ನಿಟ್ಟುಸಿರುಗಳಿಂದ ಕಾಲ ಉರುಳಿಸುತ್ತಿದ್ದನು. ಅವಳು ಅವನಿಗೆ ತನ್ನ ಸರ್ವಸ್ವವನ್ನೂ ಅರ್ಪಿಸಲು ಸಿದ್ಧಳಾಗಿದ್ದಳು. ಅದಕ್ಕಾಗಿ ಅವಕಾಶವನ್ನೂ ಕಾಯುತ್ತಿದ್ದಳು.

ಮೈಕಲ್ ತಾನೇ ಇದೆಲ್ಲಾ ಪ್ಲಾನ್ ಹಾಕಿದವನಾದ್ದರಿಂದ ಹಿಂಜರಿಯಲು ಮನಸ್ಸು ಅಂಗೀಕರಿಸದೆ ಸಂಕಟ ಪಡುತ್ತಿದ್ದನು.

ಚಂಚಲಾದೇವಿ ಎಲ್ಲರಿಗೂ 'ಟಾಟಾ' ಹೇಳಿ ಬ್ಯಾಗ್ ತೆಗೆದುಕೊಂಡು ವ್ಯಾನ್ ಬಾಗಿಲು ತೆರೆದುಕೊಂಡು ಹೊರಗೆ ಬಂದಳು.

ಹೊರಗಡೆ ಬಹಳ ಕೋಲಾಹಲವಾಗಿತ್ತು. ಅಂತಹ ಕೋಲಾಹಲದಲ್ಲೂ ತಮ್ಮ ರಹಸ್ಯ ಅದೆಷ್ಟು ಕಾಲ ಅಡಗಿರುತ್ತದೋ, ಹೇಗೆ ಕಾಪಾಡಿಕೊಳ ಬೇಕೋ ಅವಳಿಗೆ ಅರ್ಥವಾಗಲಿಲ್ಲ.

ಯಾವ ಸಮಯದಲ್ಲಿ ಎಂತಹ ಅವಾಂತರ ಬರುವುದೋ ತಿಳಿಯದಂತಿದೆ.

ಹೊರಗಡೆ ಮುಖ ಗಂಭೀರವಾಗಿಟ್ಟುಕೊಂಡಿದ್ದರೂ ಮನಸ್ಸಿನಲ್ಲಿ ಮಾತ್ರ ಅವಳಿಗೆ ಭಯ ಹಿಡಿಸುತ್ತಲೇ ಇತ್ತು.

ಫರೀದನ ಕಾಲಿಗೆ ಏಟು ತಗುಲಿ, ಅದು ಸೆಪ್ಟಿಕ್ ಆದದ್ದು ಅವಳನ್ನು ಮತ್ತಷ್ಟು ಚಿಂತಾಕ್ರಾಂತಳನ್ನಾಗಿ ಮಾಡಿತು. ಅಲ್ಲದೇ ಪ್ರತಿ ದಿನವೂ ಕಾಲ ಕೃತ್ಯ ತೀರಿಸಿಕೊಳ್ಳಲು ವ್ಯಾನ್‌ನಿಂದ ಮೈಕಲ್ ಜಾನ್, ಫರೀದರು ಹೊರಗೆ ಬಾರದೇ ಇರಲಾಗುತ್ತಿರಲಿಲ್ಲ. ಯಾವ ಸಮಯದಲ್ಲಿ ಯಾರ ಕಣ್ಣಿಗೆ ಬೀಳು ವರೋ, ಯಾರಿಗೆ ಅನುಮಾನ ಬರುವುದೋ ?....

ಚಂಚಲಾ ಸರ ಸರನೆ ಮುಂದೆ ನಡೆದಳು. ಸುಮಾರು ನೂರೈವತ್ತು ಗಜಗಳ ದೂರದಲ್ಲಿ ಒಂದು ಕಾಫಿ ಸ್ಟಾಲ್ ಕಾಣಿಸಿತು. ಒಳಗೆ ಪ್ರವೇಶಿಸಿ ಕುಳಿತು ಎರಡು ಬಿಸ್ಕತ್ತು ತಿಂದು, ಬಿಸಿ ಬಿಸಿಯಾದ ಕಾಫಿ ಕುಡಿದಳು.

ಕ್ಷಣಕಾಲ ಸುಂದರನನ್ನು ಸ್ಮರಿಸಿಕೊಂಡಳು. ಅವನ ಮಧುರ ಆಲಿಂಗನ ದಲ್ಲಿ ಕರಗಿಹೋಗಬೇಕೆಂದುಕೊಂಡಳು. ಅವನ ಆಲೋಚನೆಯಲ್ಲಿ ಎಲ್ಲಾ ವಿಷಯಗಳನ್ನೂ ಮರೆತಳು. ಮನಸ್ಸು ಸ್ವಲ್ಪ ನಿರ್ಮಲವಾಯಿತು. ಅನಂತರ ವಿಷಯಸ್ಮರಣೆಗೆ ಒಂದು ಡಾಕ್ಟರ್‌ಗಾಗಿ ನಡೆದಳು.

ಲಂಡನ್‌ನಲ್ಲಿ ಹುಟ್ಟಿ, ಪ್ಯಾರೀಸ್‌ನಲ್ಲಿ ಬೆಳೆದಂತೆ ಅಲ್ಲಿನ ನಾಜೂಕು ಗಳನ್ನು ಕಲಿತುಕೊಂಡು ನವನಾಗರಿಕತೆಯ ಸುಂದರಿಯಂತೆ ತನ್ನ ಬಿನ್ನಾಣ ಪ್ರದರ್ಶಿಸುತ್ತಾ, ಗೌನ್ ಧರಿಸಿ ನಡೆಯುತ್ತಿದ್ದ ಅವಳನ್ನು ನೋಡಿದವರು ಯಾರೂ ಇಲ್ಲಿಯೇ ಹುಟ್ಟಿ ಬೆಳೆದ ಕನ್ನಡದ ಹುಡುಗಿಯೆಂದು ತಿಳಿದುಕೊಳ್ಳು ವುದು ಅಸಾಧ್ಯವಾಗಿತ್ತು.

ಯಾವಾಗಲೂ ಮೂನೂರು ದಿನಗಳಲ್ಲಿ ವಿಜಯಪುರ ಜನ ಸಮೂಹ ದಿಂದ ಈ ರೀತಿ ಸೇರಿದಿರುವುದಿಲ್ಲ. ಆದರೆ ಈಗ ಅಂತಾ[illegible] ಉತ್ಸವ ಸಮಯವಾದ್ದರಿಂದ ಊಹಿಸಿದ್ದಕ್ಕಿಂತಲೂ ಹೆಚ್ಚು [illegible] ಷ್ಟಿಲ್ಲಾ ಆಕ್ರಮಿಸಿದ್ದರು

ಪರಾತ್ರಾಗಿ ಚಂಚಲಾಳ ನೇ[illegible] ಒಂದು ಕಡೆ [illegible] ಸಲ್ಪಟ್ಟವು. ಒಂದು ವ್ಯಾನ್‌ಮೇಲೆ 'ಡಾಕ್ಟರ್ ಗೋಪಾಲ್ ಅಂಡ್ ಸನ್ಸ್' ಎಂಬ ಕಿರಿ ದಾದ ನಾಮ ಫಲಕವಿತ್ತು.

ಹೇಗಾದರೆ ಹಾಗಾಗಲೆಂದುಕೊಂಡು ಆ ವ್ಯಾನ್ ಬಾಗಿಲು ತಟ್ಟಿದಳು. ಯಾರೋ ಬಂದು ಬಾಗಿಲು ತೆರೆದರು. ಒಳಗಡೆಗೆ ಅಡಿಯಿಟ್ಟಳು, ಮತ್ತೆ ಬಾಗಿಲು ಮುಚ್ಚಿಕೊಂಡಿತು. ಅರ್ಧ ಗಂಟೆ ಕಾಲ ಕಳೆಯಿತು. ಒಳಗಡೆ ಅದೇನು ಮಾತನಾಡಿದಳೋ ತಿಳಿಯದು. ಆದರೆ ಚಂಚಲಾದೇವಿ ಪ್ರಸನ್ನ ವದನಳಾಗಿ ಹೊರಬಂದಳು.

ಒಳಗಡೆ ಫಾರೀನ್ ವಿಸ್ಕಿಯ ಸಹಾತ್ರ್ಯದೊಂದಿಗೆ ಸುಧಾಪಾನಂದ ಅನು ಭವಿಸಿ ಬಂದಾಗಿದ್ದಳು. ಆದರೆ ಪರಿಸ್ಥಿತಿ ಅಷ್ಟು ಬೇಗ ಬೇಗನೇ ವಿಷಮ ಪರಿಣಾಮಗಳು ಸೂಚಿಸುತ್ತವೆಂದು ಅವಳು ಊಹಿಸಿರಲಿಲ್ಲ.

ಅವಳು ತಮ್ಮ ವ್ಯಾನ್ ಬಳಿಗೆ ಹೋಗುವ ಹೊತ್ತಿಗೆ ಪರಿಸ್ಥಿತಿ ಅದಲು ಬದಲಾಗಿದ್ದವು

ತುಂಟ ಹುಡುಗರ ಗಾಳೀಪಟ ಆ ವ್ಯಾನಿನೊಳಕ್ಕೆ ತೂರಿದ್ದಿತು. ಕೋಪ ದಿಂದ ಜಾನ್ ಅದನ್ನು ಹರಿದು ಚೂರು ಚೂರು ಮಾಡಿದ್ದ. ಹುಡುಗರು ರಾದ್ಧಾಂತ ಮಾಡಲು ಪ್ರಾರಂಭಿಸಿದರು. ಸುಂದರ ಅವರಿಗೆ ಸಮಾಧಾನ ಮಾಡು ವಲ್ಲಿ ವಿಫಲನಾಗಿದ್ದನು

"ನಮ್ಮ ಗಾಳೀ ಪಟ ಕೊಡು."

— ಎನ್ನುತ್ತಾ ಓರ್ವ ತುಂಟ ಹುಡುಗ ವ್ಯಾನಿನೊಳಕ್ಕೆ ಬಗ್ಗಿ ನೋಡಿದ.

"ಅದೆಲ್ಲಿ ಬಿದ್ದು ಹೋಯಿತೋ – ಈ ಕಡೆಗ ಬರಲೇ ಇಲ್ಲ"

— ಎಂದು ಹೇಳಿದ ಸುಂದರ.

ಹುಡುಗರು ಸುಮ್ಮನಾಗಲಿಲ್ಲ.

**ವ್ಯಾನಿನೊಳಕ್ಕೆ ಹೋಗಿ ನೋಡಿ ಬರುತ್ತೇವೆಂದು ಹೇಳದರು.**

ಹೇಗಾದರೂ ಇವರನ್ನು ತೊಲಗಿಸಬೇಕೆಂಬ ಉದ್ದೇಶದಿಂದ ಒಂದ ರೂಪಾಯಿ ಜೇಬಿನಿಂದ ತೆಗೆದುಕೊಡಹೋದ ಸುಂದರ.

ಹುಡುಗರು ಅಂಗೀಕರಿಸಲಿಲ್ಲ

ತಮಗೆ ಅದೇ ಗಾಳಿಪಟ ಬೇಕೆಂದು ಹೇಳುತ್ತಿದ್ದರು

ಅದೇ ಸಮಯದಲ್ಲಿ ಅಲ್ಲಿಗೆ ಬಂದ ಚಂಚಲಾದೇವಿಗೆ ಹುಡುಗರ ತುಂಟತನ, ಸುಂದರನ ಅಸಹಾಯಕತೆಯನ್ನು ನೋಡಿ ಹೃದಯ ಕಂಪಿಸಿತು. ಶರೀರವೆಲ್ಲಾ ಬೆವರಲಾರಂಭಿಸಿತು.

ಸರಿಯಾಗಿ ಅದೇ ಸಮಯ ವಿಜಯಪುರದಿಂದ ಅಲ್ಲಿಗೆ ಬಂದ ಅವಿನಾರ.

ಆ ಇಬ್ಬರ ಮಧ್ಯ ರಾಜಿ ಮಾಡಲು ಪ್ರಯತ್ನಿಸಿದನು. ಆ ಪ್ರಯತ್ನದಲ್ಲಿ ಒಳಗೆ ಬಗ್ಗಿ ನೋಡಿದ ಹುಡುಗನಿಂದ ವ್ಯಾನಿನೊಳಗಿನ ನಿಜವಾದ ರಹಸ್ಯವನ್ನು ರಹಸ್ಯವಾಗಿಯೇ ತಿಳಿದುಕೊಂಡನು.

ತನ್ನ ಜೀವಿತದಲ್ಲಿ ಪ್ರಥಮ ಭಾರಿಗೆ ಅವಿನಾಶ್ ಸಹನೆಯನ್ನು ಪ್ರದರ್ಶಿಸಿದನು. ಹುಡುಗರಿಗೆ ಯಾವುದೋ ಒಂದು ವಿಧವಾಗಿ ಸಮಾಧಾನ ಹೇಳಿ ಕಳಿಸಿಕೊಟ್ಟನು.

ಸಾಯಂಕಾಲ ಮನೆಗೆ ಸೇರಿದನು

ಚಂಚಲಾದೇವಿಯ ಕರೆಯಮೇರೆ ಬಂದು ಕುಳಿತಿದ್ದ ಪತ್ತೇದಾರ ರವಿಕಾಂತನ ಮಡದಿಯಾದ ರಜನಿದೇವಿಯನ್ನು ಕಂಡು ನಮಸ್ಕಾರ ಮಾಡಿದನು ಅವಿನಾಶ್.

# ಹದಿನೇಳು

ವಿಜಯಪುರ ಪ್ರಪಂಚ ಪ್ರಸಿದ್ಧಿ ಪಡೆಯಲು ಕಾರಣ, ಅದು ಅಂತ ಶಕ್ತಿಯ ನಗರವಾದುದರಿಂದ. ಪ್ರಪಂಚದಲ್ಲಿ ಎಲ್ಲಾ ಮೂಲೆಗಳಲ್ಲಿನ ತರುಣ ತರುಣಿಯರೆಲ್ಲಾ ಅಲ್ಲಿ ಒಂದು ಸೇರಿ ಆನಂದ ಸಾಗರದಲ್ಲಿ ತೇಲಾಡುತ್ತಾರೆಂ-ದರೆ ಮಾತ್ರವಲ್ಲದೆ ಮತ್ತೇನಾಗುತ್ತದೆ.

ಡಾಕ್ಟರ್ ಮಿಸ್ಟರ್ ಅಂಡ್ ಮಿಸೆಸ್ ಗೋಪಾಲರು ತಮ್ಮ ವ್ಯಾನಿನಲ್ಲಿ ಪತ್ತೇದಾರ ರವಿಕಾಂತ, ರಜನಿಯವರಿಗೆ ಆತಿಥ್ಯ ನೀಡಿದರು.

"ಈಗಲಾದರೂ ಅರ್ಥವಾಯಿತೇ? ಚಂಚಲಾದೇವಿ ಎಂತಹವಳೆಂಬುದು?"

—ಎಂದು ರಜನಿಯನ್ನು ಕೇಳಿದ ಪತ್ತೇದಾರ ರವಿಕಾಂತ.

"ನಾನು ಸಹ ನಿಮ್ಮನ್ನು ಅದೇ ಪ್ರಶ್ನೆಯನ್ನು ಕೇಳಬೇಕೆಂದಿದ್ದೆ ಡಾರ್ಲಿಂಗ್!"

—ಎಂದಳು ರಜನಿ.

"ನೀನು ಹೇಳಿದಂತೆಯೇ ಎಲ್ಲಾ ಕೆಲಸಗಳನ್ನೂ ಮಾಡಿದೆ. ಸರೋಜಾ ಅಟೋ ಕ್ಲಿನಿಕ್ ಮಾಲೀಕರಾದ ಕರುಣಾಕರನ್ ಎಲ್ಲಾ ವಿಷಯಗಳನ್ನೂ ತಿಳಿಸಿದ. ಕೂಡಲೇ ಅಲ್ಲಿಂದ ಇಲ್ಲಿಗೆ ನೇರವಾಗಿ ಬಂದೆ. ಅಮೀರ ಎಂಬ ಯುವಕನ ಸಹಾಯದಿಂದ ಡಾಕ್ಟರ್ ಮಿಸ್ಟರ್ ಗೋಪಾಲರ ಸಹಾಯ ಲಭಿಸಿತು. ಜೊತೆಗೆ ವಿಜಯಪುರದ ಕ್ರೈಮ್ ಬ್ರಾಂಚ್ ನನ್ನ ಜೊತೆಗೆ ಸಹಕರಿಸಿತು. ಅವರಿಗೆ

ಕೃತಜ್ಞತೆ ಅರ್ಪಿಸಬೇಕು. ಸುಂದರ, ಚಂಚಲಾದೇವಿ, ಫರೀದ್, ಜಾನ್, ಮೈಕಲ್ ಇವರು ಐವರೂ ಪೋಲೀಸರಿಗೆ ಸಿಕ್ಕಿಬಿದ್ದರು. ವ್ಯಾನಿನೊಳಗಿದ್ದ ಟ್ರಂಕ್‌ಗಳೂ ಸಹ ಸ್ವಾಧೀನ ಪಡಿಸಿಕೊಳ್ಳಲಾಯಿತು. ಇನ್ನು ಉಳಿದಿರುವುದು ನಿನ್ನ ಸಮಸ್ಯೆಯೊಂದು ಮಾತ್ರ! ಚಂಚಲಾದೇವಿಯೇ ತನ್ನ ತಪ್ಪುಗಳೆಲ್ಲವನ್ನೂ ಅಂಗೀಕರಿಸಿದಮೇಲೆ ನೀನು ಇನ್ನೂ ಅವಳನ್ನು ನಿರ್ದೋಷಿಯೆಂದೇ ವಾದಿಸುವುದು ಸರಿಯೆನ್ನಿಸುತ್ತಿಲ್ಲ"

"ನಿಮ್ಮ ಹೇಳಿಕೆಯಲ್ಲಾ ಮುಗಿಯಿತು ತಾನೇ?"

— ಎಂದು ಕೇಳಿದಳು ರಜನಿ.

"ಹುಂ! ಮುಗಿಯಿತು."

"ಇನ್ನು ನಾನು ಹೇಳುವುದು ಕೇಳಿ. ಅನಾವಶ್ಯಕವಾಗಿ ಕುತೂಹಲ ಕೆರಳಿಸುವುದು ಚೆನ್ನಾಗಿರುವುದಿಲ್ಲ. ನಾನು ಈಗ ಹೇಳುವ ನಿಜವಾದ ರಹಸ್ಯವನ್ನು ಕಿವಿಗೊಟ್ಟು ಚೆನ್ನಾಗಿ ಆಲಿಸಿರಿ. ಚೋರನಾರಿ ಚಂಚಲಾ ಯಾರು, ಚಂಚಲಾದೇವಿ ಯಾರೆಂಬುದು ತಿಳಿಯುತ್ತದೆ."

— ಎಂದು ಹೇಳಿ ಪ್ರಾರಂಭಿಸಿದಳು. ರಜನಿ.

"ನಿಮ್ಮನ್ನು ಸರೋಜಾ ಆರ್ಟ್ ಕ್ಲಿನಿಕ್‌ಗೆ ಕಳುಹಿಸಿ ಚಂಚಲಾದೇವಿ ಟೆಲಿಗ್ರಾಮ್ ಕರೆಯ ಮೇರೆ ನಾನು ಇಲ್ಲಿಗೆ ಬಂದೆ. ನನಗೆ ಟ್ರಂಕ್‌ನೊಂದಿಗೆ ಕೆಲಸವಿರಲಿಲ್ಲ. ನನಗೆ ಬೇಕಾಗಿದ್ದುದು ಚಂಚಲಾದೇವಿ ಮಾತ್ರ. ಅವಳಿಗಾಗಿ ಬಂದೆ. ಆದ್ದರಿಂದ ಅವಳನ್ನು ಕರೆದುಕೊಂಡು ಹೊರಟುಹೋಗಿದ್ದರೆ ಸರಿಹೋಗುತ್ತಿತ್ತು. ಅಷ್ಟು ಹೊತ್ತಿಗಾಗಲೇ ಅವಿನಾಶ ಟ್ರಂಕ್ ಎಲ್ಲಿದೆಯೆಂಬುದು ತಿಳಿದುಕೊಂಡು ಬಂದಿದ್ದನು. ಅವನು ಒಂದು ವಿಧವಾದ ಪತ್ತೇದಾರಿಕೆಯ ಸ್ಪಿರಿಟ್ ಉಳ್ಳವನು. ಕೂಡಲೇ ಅವನನ್ನು ನಿಮ್ಮ ಬಳಿಗೆ ಕಳುಹಿಸಿದೆ. ಅವನು ನೀವು ಬಸ್ ಇಳಿಯುತ್ತಲೇ ನಿಮ್ಮ ಪರಿಚಯ ಮಾಡಿಕೊಂಡು ಟ್ರಂಕ್ ಎಲ್ಲಿದೆಯೆಂಬುದು ತಿಳಿಸಿದನು. ಈ ಟ್ರಂಕ್ ಪತ್ತೇದಾರಿಕೆ ಘನತೆ ಅವನಿಗೆ ಲಭಿಸಬೇಕು. ನಿಮ್ಮ ಜೊತೆಗೆ ನಾನು ಸಹಾಯ ಮಾಡಬೇಕೆಂಬ ಉದ್ದೇಶವಿದ್ದುದರಿಂದ ಇಲ್ಲಿಯೇ ಉಳಿಯಬೇಕಾಯಿತು."

ರವಿಕಾಂತ ಆಶ್ಚರ್ಯದಿಂದ ರಜನಿಯ ಮಾತುಗಳನ್ನು ಆಲಿಸುತ್ತಿದ್ದನು.

"ನೀವು ಒಂದು ವಿಷಯ ಅರ್ಥ ಮಾಡಿಕೊಂಡು ತಿಳಿದುಕೊಳ್ಳಬೇಕು.

ಬಗುಳುವ ನಾಯಿ ಕಚ್ಚುವುದಿಲ್ಲ. ಕಚ್ಚುವ ನಾಯಿ ಬಗುಳುವುದಿಲ್ಲ. ಬಗುಳದ, ಕಚ್ಚದ ನಾಯಿಗಳು ಎಲ್ಲಿಯೂ ಇಲ್ಲ. ಚಂಚಲಾದೇವಿಯು.... ಅಂದರೆ ನಿಮ್ಮ ರೂಮ್ ಭಕ್ತನಾದ ಪೂರ್ಣಚಂದ್ರ ತೇಜಸ್ವಿಯನ್ನು ಏನೂ ಅರಿಯದ ಅನಾಯಕಳಂತೆ ಆರಾಧಿಸಿದ ಚಂಚಲಾದೇವಿ ಅದೆಷ್ಟು ಮನ ಕರಗುವಂತೆ ಹೇಳಿದರೂ ನಿಮಗೆ ಕಪಟ ನಾಟಕಗಳಂತೆಯೇ ತೋರುತ್ತವೆ. ಅವಳು ಸಂಪೂರ್ಣವಾಗಿ ಆಶಾಭಂಗವುಂಟಾದುದರಿಂದ ಮಾನಸಿಕ ವೇದನೆಗೆ ಗುರಿಯಾಗಿ ಹುಚ್ಚಳಾದಳು. ಅದಕ್ಕೇ ಬಾಲಚಂದ್ರನ ಮೇಲಿನ ರೋಷದಿಂದ ಆ ರಮೇಶನ ಬಳಿಗೆ ಹೋಗಿ ತನ್ನ ಸರ್ವಸ್ವವನ್ನೂ ಧಾರೆಯೆರೆದಳು. ಆ ಪ್ರಣಯೋನ್ಮಾದದಲ್ಲಿ ಏನೂ ಅರಿಯದೆ ಬಾಯಿಗೆ ಬಂದಂತೆ ಮಾತನಾಡಿದಳು. ಅವನು – ಅಂದರೆ ರಮೇಶ ಜೇನು ಸವರಿದ ಮಧುರ ಖಡ್ಗದಂತೆ ಅವಳನ್ನು ನಂಬಿಸಿದ. ಅವಳೊಂದಿಗೆ ವಿಜಯಪುರಕ್ಕೆ ಬಂದನು. ಇಲ್ಲಿ ವೇಶ್ಯಾಗೃಹವಾದ ಹೋಟೆಲ್ ಮಾಲಿಗೆ ಅವಳನ್ನು ಮೋಸದಿಂದ ಎರಡು ಸಾವಿರ ರೂಪಾಯಿಗಳಿಗೆ ಮಾರಿ, ಏನೂ ಅರಿಯದವನಂತೆ ಬೆಂಗಳೂರಿಗೆ ಬಂದನು. ಆ ಚಂಚಲಾದೇವಿ ನಿಮಗೆ ಸಹಾಯ ಮಾಡಲ್ಪಟ್ಟ ಅಮಾರ್ ಎಂಬ ಯುವಕನಿಂದ ರಕ್ಷಿಸಲ್ಪಟ್ಟಳು"

"ಹೌದೇ ?"

ಆಶ್ಚರ್ಯದಿಂದ ಕೇಳಿದ ರವಿಕಾಂತ.

"ಹೌದು ! ಇದರೊಂದಿಗೆ ಅವಳಲ್ಲಿನ ಜ್ಞಾನಜ್ಯೋತಿ ತೆರೆಯಿತು. ಈಗ ಅವಳು ಮೊದಲಿನಂತವಳಾಗಿ ಕಲ್ಮಶವಿಲ್ಲದಂಥವಳಾಗಿದ್ದಾಳೆ. ಅಮಾರ್ ಅವಳನ್ನು ವಿವಾಹವಾಗಲು ಅಂಗೀಕರಿಸಿದ್ದಾನೆ. ಅವಳೂ ಸಹ ಒಪ್ಪಿಗೆ ನೀಡಿದ್ದಾಳೆ. ಈಗ ತಾನೇ ಬಸ್ಸಿನಲ್ಲಿ ಬೆಂಗಳೂರಿಗೆ ಹೋದಳು. ಇನ್ನು ಮೂರು ದಿನದಲ್ಲಿ ನನ್ನ ಕೈಯಿಂದಲೇ ಅವರಿಗೆ ಮದುವೆಯಾಗಲಿದೆ."

"ಸರಿ ! ಒಳ್ಳೆಯ ಕೆಲಸ ಮಾಡಿದೆ."

"ಇನ್ನು ಆ ವಿಷಯ ಬಿಟ್ಟರೆ, ನೀವು ಅದೆಷ್ಟು ಮಾಡಿದ ಚಂಚಲಾದೇವಿಯ ವಿಷಯ – ಅವಳದೇ ಬೇರೆ. ಬಳ್ಳಿ ಅಲುಗಿಸಿದರೆ ಬುಡವೆಲ್ಲಾ ಕುಣಿಯುತ್ತದೆ, ಅವಳನ್ನು ಕುರಿತು ಸಂಪೂರ್ಣವಾಗಿ ಹೇಳಬೇಕೆಂದರೆ ಬಹಳ ಕಥೆಯಾಗುತ್ತದೆ,"

ಅವಳೇ – ಚೋರನಾರಿ ಚಂಚಲಾದೇವಿ."

"ಅವಳ ಕಥೆ ಮತ್ತೊಂದು ಸಾರಿ ಬಿಡುವಿದ್ದಾಗ ಹೇಳುತ್ತೇನೆ,"

"ಈ ಕಳ್ಳರ ಕೂಟ ವಿಚಿತ್ರವಾದ ಕೂಟ"

"ಸರಕಾರದಿಂದಲೂ, ಸಮಾಜದಿಂದಲೂ ನಮಗೆ ಅನ್ಯಾಯ ನಡೆಯ ಬಹುದು. ಅವುಗಳನ್ನು ಸರಿಪಡಿಸಿಕೊಳ್ಳಬೇಕೆಂದರೆ ಆರಿಸಿಕೊಳ್ಳುವ ಮಾರ್ಗ ಸರಿಯಾಗಿರಬೇಕು,"

"ಹಣ ಸರಕಾರದಿಂದ್ದಲೂ, ಹೇಳಿಕೊಂಡು ಸುಮ್ಮನಿರುವುದರಲ್ಲಿ ತಪ್ಪಿಲ್ಲ. ಆದರೆ ಹಣವಿದೆಯೆಂದು ಪೈಶಾಚಿಕ ಕೃತ್ಯ ಮಾಡಬಾರದು.

"ನೀವು ಅರೆಸ್ಟ್ ಮಾಡಿದ ಚಂಚಲಾದೇವಿ-ವಿದ್ಯಾವಂತಳೇ ಆದರೆ, ಅವಿವೇಕತನದಿಂದ ವರ್ತಿಸಿದಳು. ಎರಡು ಪ್ರಾಣಗಳನ್ನು ಬಲಿ ತೆಗೆದುಕೊಂಡಳು. ಅವರೇ ಜಾಗ್ರತೆಯಿಂದಿದ್ದರೂ ಪ್ರಾಣ ಕಳೆದುಕೊಳ್ಳುತ್ತಿರಲಿಲ್ಲ"

"ಹೌದು!"

"ಎಂತಹ ಮೇಧಾವಿಗಾದರೂ ಕಾಮನ್ ಸೆನ್ಸ್ ಪಾಯಿಂಟ್‌ಗಳಿವ. ನೀವಾಗಲಿ, ನಾನಾಗಲಿ ಈ ದರೋಡೆಕೋರರ ಕೂಟವನ್ನು ಪತ್ತೆ ಮಾಡಿದ ವೆಂದು ಹೇಳಿದರೆ ಅವರ ವಿವೇಕ ಹೀನತೆಯಿಂದಲೇ ಹೊರತು, ನಮ್ಮ ಬುದ್ಧಿ ಚತುರತೆಯಿಂದಲ್ಲ ಈ ದರೋಡೆಗಾರರ ಕೂಟದ ಪತ್ತೇದಾರಿಕೆಯ ಗೌರವ ಅವಿವಾರನಿಗೆ ಸಲ್ಲಬೇಕು"

—ಎಂದು ಹೇಳಿದನು ರಜನಿ.

"ಏನೇ ಆದರೂ ನಿಮ್ಮ ಹಠಸಾಧನೆಯೇ ಗೆದ್ದಿತು"

—ಎಂದು ಹೇಳಿದ ಪತ್ತೇದಾರ ರವಿಕಾಂತ.

"ಆದರೂ ನಿಮ್ಮ ಹಠಸಾಧನೆ ಇಲ್ಲಿ ಸೋತಿಲ್ಲ. ನೀವೂ ಗೆದ್ದಿರಲ್ಲಾ...."

"ಹೌದೌದು ಚಂಚಲಾದೇವಿಯದು ಇಬ್ಬರು ಇದ್ದುದರಿಂದ ಇಬ್ಬರೂ ಗೆದ್ದೆವು"

"ನಾವು ಇನ್ನು ಮನೆಗೆ ಹೋಗೋಣ ನಡೆಯಿರಿ"

— ಎಂದು ಹೇಳಿದಳು ರಜನಿ

"ಮೊದಲು ನೀವು ನಡೆಯಿರಿ. ಈ ರಜನಿ ಪ್ರಿಯ ನಿಮ್ಮ ಪಕ್ಕದಲ್ಲಿಯೇ ಇರುತ್ತಾನೆ"

—ಎನ್ನುತ್ತಾ ರಜನಿಯ ಕೈ ಹಿಡಿದುಕೊಂಡ ಪತ್ತೇದಾರ ರವಿಕಾಂತ.

—: ಸಂಪೂರ್ಣ :—

ಅಚ್ಚಿನಲ್ಲಿದೆ !

ಅವಳು ಸುಂದರಿ, ನವಯೌವ್ವನಭರಿತಳಾದ ಹೆಣ್ಣು. ಹಣಕ್ಕಾಗಿ ಮುದುಕನನ್ನು ಮದುವೆಯಾದಳು. ನಿರೀಕ್ಷಿಸಿದಂತೆ ವೈಧವ್ಯ ಅವಳನ್ನು ಹುಡುಕಿಕೊಂಡು ಬಂದಿತು.

ಆ ಸುಂದರ ವಿಧವೆಯ ಜೊತೆಗೆ ಅವಳ ಅಪಾರ ಆಸ್ತಿಯನ್ನು ಕಬಳಿಸಲು ಕಾಮುಕ ಯುವಕರು ಸದಾಕಾಲ ದುಂಬಿಗಳಂತೆ ಅವಳ ಸುತ್ತಮುತ್ತ ತುಂಬಿದ್ದರು.

ಆ ಹೆಣ್ಣು ಅಸಹಾಯಕ ವಿಧವೆ ಎಂದು ತಿಳಿದವರು ಶೀಘ್ರದಲ್ಲಿಯೇ ಆಕೆ 'ನಾಗರ ಹೆಣ್ಣು' ಎಂಬುದನ್ನು ತಿಳಿದುಕೊಳ್ಳಬೇಕಾಯಿತು.




...ಸರಾಗವಾಗಿ ಓದಿಸಿಕೊಂಡು ಹೋಗುವ ಪತ್ತೇದಾರಿ

ಬಿ. ಕೆ. ಸುಂದರರಾಜ್ ಬರೆದುದು

# ನಾಗರ ಹೆಣ್ಣು

ಪುಟಗಳು—144 ಬೆಲೆ—2-50



ಪ್ರಕಾಶಕರು :

ರಾಜೇಂದ್ರ ಪ್ರಕಾಶನ

ನಂ. ಕೆ. 56, ನಾರಾಯಣ ನಿಲಯ

ಬಂಡಿರೆಡ್ಡಿ ಸರ್ಕಲ್, ಲಕ್ಷ್ಮೀನಾರಾಯಣಪುರಂ, ಬೆಂಗಳೂರು-21